ಶ್ರೀ ಗವಿಮಠದ

# ಶ್ರೀ ಗುರು ಫಿರಂಗೀಶ್ವರ ಚರಿತ್ರೆ



ವಿದ್ವಾನ್ ಜೆ.ವಿ. ಶಿವಸ್ವಾಮಿ

Rs. 20/00

# ಶ್ರೀಗವಿಮಠದ

# ಶ್ರೀಗುರುಷಿರಂಗೀಶ್ವರ ಚರಿತ್ರೆ

ಶ್ರೀ ಎಂ. ಡಿ. ಶಂಕರರಾಮ ಅಯ್ಯರು
ಇವರಿಗೆ ಆಶೀರ್ವಾದಪೂರ್ವಕ.

(ವಿಜಯ ಬ್ಯಾಂಕ್, ಬೆಂಗಳೂರು.)

ಇತ್ಯಾಶಿಷಃ

ಗ್ರಂಥಕರ್ತ

**ವಿದ್ವಾನ್, ಹಿಂದೀರತ್ನ ಜಿ. ವಿ. ಶಿವಸ್ವಾಮಿ**



**ಶ್ರೀಗವಿಮಠ, ಅಂಕನಹಳ್ಳಿ**

**ಕುಣಿಗಲ್ ತಾಲ್ಲೂಕು, ತುಮಕೂರು ಜಿಲ್ಲೆ**

ಶ್ರೀ ಫಿರಂಗಿಸ್ವಾಮಿ ಪ್ರಸನ್ನ



ಶ್ರೀ ಶ್ರೀ ಶ್ರೀ ಸಿದ್ಧಲಿಂಗ ಶಿವಾಚಾರ್ಯ ಸ್ವಾಮಿಗಳು
ಗವೀಮಠ: ಅಂಕನಹಳ್ಳಿ ; ಕುಣಿಗಲ್ ತಾಲ್ಲೂಕು



ಪರಮಪೂಜ್ಯ ಶ್ರೀ ಬಸವಯ್ಯಸ್ವಾಮಿಗಳು
ಗವೀಮಠ, ಅಂಕನಹಳ್ಳಿ

# ಸಂದೇಶ



ಕರ್ನಾಟಕ ದೇಶವು ಬಹು ಮಂದಿ ಸಾಧು ಸಂತರ, ದಾಸರ ಶರಣರ ನಾಡೆಂದು ಪ್ರಖ್ಯಾತವಾಗಿದೆ. ಆಗಾಗ್ಗೆ ಇಲ್ಲಿ ಉದಯಿಸಿದ ಮಹಾ ವ್ಯಕ್ತಿಗಳು ತಮ್ಮ ಅತ್ಯುನ್ನತವಾದ ಆತ್ಮೀಯ ಸಂಪತ್ತಿನ ಪ್ರಭಾವದಿಂದ ಮಾನವಕುಲದ ಕಲ್ಯಾಣ ಕಾರ್ಯವನ್ನು ಎಸಗಿ ಸ್ಮರಣೀಯರಾಗಿದ್ದಾರೆ.

ಕುಣಿಗಲ್ ತಾಲ್ಲೂಕಿನ ಅಂಕನಹಳ್ಳಿ ಗವಿಮಠದ ಶ್ರೀಗುರು ಫಿರಂಗೀಶ್ವರರು ಶರಣರ ಪರಂಪರೆಯಲ್ಲಿ ಬಂದಿರುವ ಸಿದ್ಧಪುರುಷರಲ್ಲೊಬ್ಬರಾಗಿದ್ದಾರೆ. ತಮ್ಮ ಲಿಂಗ ಪೂಜಾನಿಷ್ಠೆಯಿಂದ ಪ್ರಜ್ವಲಿತ ಆಧ್ಯಾತ್ಮ ತೇಜಸ್ಸುಳ್ಳವರಾಗಿ ಅನೇಕ ಪವಾಡಗಳನ್ನು ಮಾಡಿ ಮೆರೆದರೆಂದು ತಿಳಿಯುತ್ತದೆ. ಅಂದಿನಕಾಲದಲ್ಲಿ ಮೈಸೂರು ದೇಶದ ಅರಸರ ಅಪ್ಪಣೆಯ ಮೇರೆಗೆ ಪ್ರಯೋಗಿಸಲ್ಪಟ್ಟ ಫಿರಂಗಿಗಳನ್ನು ಪುಷ್ಪಗಳನ್ನಾಗಿ ಮಾಡಿ ರಾಜಮನ್ನಣೆ ಪಡೆದರೆಂದು ಸ್ಥಳ ಪುರಾಣದಿಂದ ಗೊತ್ತಾಗುತ್ತದೆ.

ವಿದ್ವಾನ್ ಜಿ. ವಿ. ಶಿವಸ್ವಾಮಿಯು ಈ ಪುಣ್ಯ ಪುರುಷರ ಚರಿತ್ರೆಯನ್ನು ಬರೆದು ಸಾಹಿತ್ಯ ಪ್ರಪಂಚಕ್ಕೆ ತನ್ನ ಕೊಡುಗೆಯನ್ನು ಸಲ್ಲಿಸಿರುವುದು ಸಂತೋಷಕರವಾಗಿದೆ. ಸಾಹಿತ್ಯಾಭಿರುಚಿಯುಳ್ಳ ಉತ್ಸಾಹೀತರುಣ ಲೇಖನ ಕಲೆಯಲ್ಲಿ ವಿಶೇಷ ಆಸಕ್ತಿಯುಳ್ಳವನು, ಈತನ ಪ್ರಭಾವ ಕೃತಿಯು ಸರ್ವಜನಾದರಣೀಯವಾಗಲೆಂದೂ ಇನ್ನೂ ಹಲವಾರು ಕೃತಿಗಳನ್ನು ರಚಿಸುವ ಶಕ್ತಿ ಸಾಮರ್ಥ್ಯಗಳನ್ನು ಈಶನು ಅನುಗ್ರಹಿಸಲೆಂದು ಹಾರೈಸುತ್ತೇವೆ.

ಡಾ|| ಶ್ರೀ ಶಿವಕುಮಾರಸ್ವಾಮಿಗಳು

29-9-1973
ಶ್ರೀ ಸಿದ್ಧಗಂಗಾ ಕ್ಷೇತ್ರ

# ಮುನ್ನುಡಿ

ತುಮಕೂರು ಜಿಲ್ಲೆ ಕುಣಿಗಲ್ ತಾಲ್ಲೂಕು ಹುಲಿಯೂರು ದುರ್ಗದ ಹೋಬಳಿ ಅಂಕನಹಳ್ಳಿ ಶ್ರೀ ಗವಿಮಠದ ವಿಷಯವನ್ನು ಅಲ್ಲಿ ನಡೆಯುತ್ತಿರುವ ಮಹತ್ಕಾರ್ಯಗಳನ್ನು ನಾನು ನಲವತ್ತು ವರ್ಷಗಳಿಂದ ಕೇಳುತ್ತಾ ಬಂದಿರುವೆ. ಈಗ ನಮ್ಮ ಹಸ್ತಗತವಾಗಿರುವ ಶ್ರೀಗುರುಫಿರಂಗೀಶ್ವರ ಚರಿತ್ರೆಯಲ್ಲಿ ಈ ಮಠದ ಹಿಂದಿನ ಮಹಾಮಹಿಮರಾದ ಶ್ರೀಗುರುಫಿರಂಗೀಶ್ವರರ ವಿಷಯವು ಉಕ್ತವಾಗಿದೆ. ತುಮಕೂರಿನಲ್ಲಿ ಹುಟ್ಟಿ ಬೆಳೆದ ನನಗೆ ಆ ಜಿಲ್ಲೆಯಲ್ಲಿ ಆಗಿಹೋದ ಒಬ್ಬ ಮಹಿಮಾಶಾಲಿಗಳ ಚರಿತ್ರೆಯನ್ನು ಓದುವುದು ನಿಜವಾಗಿಯೂ ಕುತೂಹಲಕರವಾದ ಸಂಗತಿಯಾಗಿದೆ.

ಬೆಂಗಳೂರು ನಗರದ ಕಾರ್ಪೊರೇಷನ್ ಹೈಸ್ಕೂಲ್ ಒಂದರಲ್ಲಿ ಭಾಷಾ ಅಧ್ಯಾಪಕರಾಗಿರುವ ವಿದ್ವಾನ್, ಹಿಂದೀರತ್ನ, ಜಿ. ವಿ. ಶಿವಸ್ವಾಮಿಯವರು ನನಗೆ ತುಂಬಾ ಪರಿಚಿತರು. ಇವರು ಉತ್ಸಾಹಿ ತರುಣ ಸಾಹಿತಿಗಳು ಹಾಗೂ ಸಾರ್ವಜನಿಕ ಸೇವಾಕರ್ತರು ಮೇಲಿಂದ ಮೇಲೆ ಇವರನ್ನು ನೋಡುವ ಅವಕಾಶವು ಬರುತ್ತಿರುವುದುಂಟು. ಶ್ರೀಯುತರು ಅತ್ಯಂತ ಭಕ್ತಿಯಿಂದ ಬರೆದಿರುವ ಶ್ರೀ ಗುರುಫಿರಂಗೀಶ್ವರ ಚರಿತ್ರೆಗೆ ನಾನು ಒಂದು ಮುನ್ನುಡಿಯನ್ನು ಬರೆದುಕೊಡಲು ಸಂತೋಷವಾಗಿ ಒಪ್ಪಿಕೊಂಡೆನು. ಅದರ ಫಲವಾಗಿಯೇ ಇಲ್ಲಿ ನಾಲ್ಕು ಮಾತುಗಳನ್ನು ಬರೆದಿರುತ್ತೇನೆ.

ತುಮಕೂರು ಜಿಲ್ಲೆಯು ಕರ್ನಾಟಕದ ಮಧ್ಯಭಾಗದಲ್ಲಿ ಇದೆ. ಅದನ್ನು ಅಲಂಕಾರ ಭಾಷೆಯಲ್ಲಿ ಹೇಳುವುದಾದರೆ ತುಮಕೂರು ಜಿಲ್ಲೆ ಕರ್ನಾಟಕ ಮಾತೆಯ ಮಂಗಳಸೂತ್ರದಂತಿದೆ. ಈ ಜಿಲ್ಲೆಯು ಪ್ರಕೃತಿ ಸೌಂದರ್ಯಕ್ಕೂ ಇತಿಹಾಸದ ಮಹತ್ವಕ್ಕೂ ಮಹಾಕವಿಗಳ ಅಗ್ಗಳಿಕೆಗೂ ಶಿವಯೋಗಿಗಳ ಪವಾಡಕ್ಕೂ ರಾಜಾಧಿರಾಜರ ವೀರಶ್ರೀಗೂ ಉದಾರ ದಾನಿಗಳ ತ್ಯಾಗ ಗುಣಕ್ಕೂ ಹೆಸರಾಗಿದೆ. ಈ ಜಿಲ್ಲೆಯಲ್ಲಿರುವ ಬಿಜ್ಜಾವರದಲ್ಲಿ ಸಾವಿರಾರು ವರ್ಷಗಳ ಹಿಂದೆ ಅಮ್ಮವ್ವೆ ಎಂಬ ಶಿವಶರಣೆಯಾಗಿ ಹೋಗಿದ್ದಾಳೆ. ಅವಳನ್ನು

ಪುರಾಣಗಳಲ್ಲಿ ಬಿಜ್ಜಮಹಾದೇವಿ ಎಂದು ಕರೆದಿದ್ದಾರೆ. ಮಹಾಕವಿ ಹಂಪೆ ಹರಿಹರೇಶ್ವರನು ಅವಳಬಗ್ಗೆ ಒಂದು ರಗಳೆಯನ್ನು ಬರೆದಿರುತ್ತಾನೆ. ಪರಮೇಶ್ವರನನ್ನು ಮಗುವನ್ನಾಗಿ ತೊಟ್ಟಿಲಲ್ಲಿ ತೂಗಿದ ಪುಣ್ಯ ಅವಳದಾಗಿದೆ. ಅವಳ ಸಮಾಧಿಯು ಮಧುಗಿರಿಯ ಪಕ್ಕದಲ್ಲಿದೆ. ಪೂರ್ವಕಾಲದಲ್ಲಿ ಅಮರ ಗುಂಡವೆಂದು ಪ್ರಸಿದ್ಧವಾಗಿದ್ದ ಈಗಿನ ಗುಬ್ಬಿಯಲ್ಲಿ ಹನ್ನೆರಡನೆಯ ಶತಮಾನಕ್ಕೂ ಹಿಂದೆ ಮಲ್ಲಿಕಾರ್ಜುನತಂದೆ ಎಂಬ ವಚನಕಾರನು ಆಗಿಹೋಗಿದ್ದಾನೆ. ಮಹಾಕವಿಗಳಾದ ಮಲ್ಲಣಾರ್ಯ, ಶಾಂತೇಶ ಮೊದಲಾದ ವರು ಗುಬ್ಬಿಯವರೇ ಆಗಿದ್ದಾರೆ. ಹರದನಹಳ್ಳಿಯ ಗೋಸಲಗುರುಗಳ ಪರಂಪರೆಗೆ ಸೇರಿದ ಶ್ರೀಸಿದ್ಧೇಶ್ವರರು ಈಗಿನ ಸಿದ್ಧಗಂಗೆಯಲ್ಲಿ ಮಹಿಮೆಯನ್ನು ತೋರಿಸಿ ಅಲ್ಲಿಯೇ ಸಮಾಧಿಸ್ಥರಾಗಿದ್ದಾರೆ. ಅವರ ಶಿಷ್ಯರಾದ ಶಂಕರಾನಂದ ಸ್ವಾಮಿಗಳು ಸಿದ್ಧೇಶ್ವರನ ಬೆಟ್ಟದ ಪಕ್ಕದಲ್ಲಿಯೂ (ಕೊರಟಗೆರೆ ಪಕ್ಕ) ಇವರ ಶಿಷ್ಯರಾದ ಶ್ರೀ ಚನ್ನಬಸವೇಶ್ವರರು ಗುಬ್ಬಿಯಲ್ಲಿಯೂ, ಇವರ ಕರಕಮಲ ಸಂಜಾತರಾದ ಶ್ರೀ ಸಿದ್ಧಲಿಂಗೇಶ್ವರರು ಎಡೆಯೂರಿನಲ್ಲಿಯೂ ಸಮಾಧಿಸ್ಥರಾಗಿದ್ದಾರೆ. ಇವರ ತಪೋಭೂಮಿ ಕಗ್ಗೆರೆ. ಚಿಕ್ಕನಾಯಕನಹಳ್ಳಿ ತಾಲ್ಲೂಕು ಶ್ರೀ ಕುಪ್ಪೂರು ಗದ್ದಿಗೆಯಲ್ಲಿ ಮಹಾಮಹಿಮರಾದ ಶ್ರೀ ಮರುಳ ಸಿದ್ಧೇಶ್ವರರು ಸಮಾಧಿಸ್ಥರಾಗಿದ್ದಾರೆ. ಗೋಡೆಕೆರೆ ಮತ್ತು ಎಳನಡು ಶ್ರೀ ಸಿದ್ಧರಾಮೇಶ್ವರ ಸುಕ್ಷೇತ್ರವಾಗಿದೆ. ಗೂಳೂರು ಸಿದ್ಧವೀರಣಾರ್ಯರೇ ಮೊದಲಾದ ಕವಿಗಳಿಗೆ ನೆಲಬೀಡಾಗಿದೆ. ಬಿಜ್ಜಾವರ ಮತ್ತು ಹಾಗಲವಾಡಿ ಗಳು ವೀರಶೈವ ಧರ್ಮಪ್ರಭುಗಳಿಂದ ಪ್ರಸಿದ್ಧವಾಗಿವೆ. ದೇವರಾಯನದುರ್ಗ ಸೀಬಿ-ನರಸಿಂಹ ಮೊದಲಾದ ಕ್ಷೇತ್ರಗಳಲ್ಲಿ ಅನೇಕ ಮಹಿಮೆಗಳು ನಡೆದಿವೆ.

ತುಮಕೂರು ಜಿಲ್ಲೆಯೂ ಫಲವತ್ತಾದ ಬೆಳೆಗೂ ಕಲ್ಪವೃಕ್ಷವೆನಿಸಿದ—ತೆಂಗಿನ ಬೆಳೆಗೂ ಪ್ರಸಿದ್ಧವಾಗಿದೆ. ಇಂತಹ ಫಲವತ್ತಾದ ಮಹಿಮಾನ್ವಿತವಾದ ಜಿಲ್ಲೆಯ ಕುಣಿಗಲ್ ತಾಲ್ಲೂಕಿನಲ್ಲಿ ಹುಲಿಯೂರುದುರ್ಗ, ಹುತ್ರೀದುರ್ಗ, ಸಾವನದುರ್ಗ (ಮಾಗಡಿ ತಾಲ್ಲೂಕು) ಗಳ ಮಧ್ಯದಲ್ಲಿ ಅಂಕನಹಳ್ಳಿ ಶ್ರೀ ಗವೀಮಠವಿದೆ. ಇದರ ಮೂಲಸ್ಥಳ ಕುಣಿಗಲ್ ಸಮೀಪದ ಗವಿಮಠ ವೆಂದು ತಿಳಿದುಬಂದಿರುತ್ತದೆ. ಸುಮಾರು ಹದಿನೇಳನೆಯ ಶತಮಾನದ ಮಧ್ಯಭಾಗದಲ್ಲಿ ಶಿವಯೋಗಿಗಳಾದ ಶ್ರೀ ಗುರುಘಿರಂಗೀಶ್ವರರು ಪ್ರಸಿದ್ಧ

ಪುರುಷರಾಗಿ ಹೋಗಿದ್ದಾರೆ. ಈ ಮಹಿಮರು ಅನೇಕ ಪವಾಡಗಳಿಂದ ಮೆರೆದು ಅಂದಿನ ಅರಸರ ಮನ್ನಣೆಗೂ ಪಾತ್ರರಾಗಿದ್ದರು. ಈ ಪ್ರದೇಶದ ಗ್ರಾಮಗಳಲ್ಲಿ ಅವರ ದಿವ್ಯ ಮಹಿಮೆಯನ್ನು ದಂತಕಥೆಗಳ ಮೂಲಕ ಹೇಳುತ್ತಾ ಬಂದಿರುತ್ತಾರೆ. ಅವರ ಸಮಾಧಿಯು ಅಂಕನಹಳ್ಳಿ ಶ್ರೀಗವೀಮಠದಲ್ಲಿ ಇದೆ. ಶ್ರೀಜಗದ್ಗುರು ರೇಣುಕಾಚಾರ್ಯರ ಪರಂಪರೆಗೆ ಸೇರಿದ ಈ ಗವೀಮಠದಲ್ಲಿ ಅನೇಕಜನ ಮಹಿಮಾಪುರುಷರಾಗಿ ಹೋಗಿದ್ದಾರೆ. ಪ್ರಕೃತ ಈ ಮಠಕ್ಕೆ ಶ್ರೀ ಶ್ರೀ ಸಿದ್ಧಲಿಂಗ ಶಿವಾಚಾರ್ಯಸ್ವಾಮಿಗಳು ಅಧ್ಯಕ್ಷರಾಗಿ ಕಂಗೊಳಿಸುತ್ತಿದ್ದಾರೆ.

ಈ ಗವಿಮಠವನ್ನು ಸುಮಾರುಮೂವತ್ತುವರ್ಷಗಳಿಂದ ಶ್ರೀ ಸಿದ್ಧಲಿಂಗ ಶಿವಾಚಾರ್ಯಸ್ವಾಮಿಗಳು ಸರ್ವತೋಮುಖವಾಗಿ ಅಭಿವೃದ್ಧಿಗೆ ತಂದಿರುತ್ತಾರೆ. ಈಗಿನ ಕಾಲಧರ್ಮಕ್ಕೆ ಅನುಗುಣವಾಗಿ ಒಂದು ಪ್ರಾಥಮಿಕ ಶಾಲೆ, ಪ್ರೌಢಶಾಲೆ, ಸಾರ್ವಜನಿಕ ವಿದ್ಯಾರ್ಥಿನಿಲಯವನ್ನು ಪ್ರಾರಂಭಿಸಿರುತ್ತಾರೆ. ಸುಮಾರು 200 ಜನ ಬಡ ವಿದ್ಯಾರ್ಥಿಗಳಿಗೆ ಅಶನ-ವಸತಿಗಳನ್ನು ನೀಡಿರುತ್ತಾರೆ. ನಮ್ಮ ನಾಡಿನ ಎಲ್ಲಾ ಪ್ರಜೆಗಳು ವಿದ್ಯಾವಂತರಾಗಬೇಕು. ಪ್ರಜಾಪ್ರಭುತ್ವವು ಯಶಸ್ವಿಯಾಗಬೇಕೆಂಬ ನಮ್ಮ ಸರ್ಕಾರದ ಘನ ಉದ್ದೇಶವು ನೆರವೇರಬೇಕಾದರೆ, ಹಿಂದುಳಿದ ಇಂತಹ ಗ್ರಾಮಾಂತರ ಪ್ರದೇಶಗಳಲ್ಲಿ ಅಂಕನಹಳ್ಳಿ ಶ್ರೀ ಗವಿಮಠದ ಸ್ವಾಮಿಗಳು ಮಾಡಿರುವಂತೆ ವಿದ್ಯಾಭ್ಯಾಸಕ್ಕೆ ಅನುಕೂಲಗಳು ಹೆಚ್ಚಾಗಬೇಕಾಗಿದೆ. ಒಂದು ದೃಷ್ಟಿಯಿಂದ ರಾಷ್ಟ್ರೀಯ ಮನೋಭಾವನೆಯಿಂದ ಇದು ಕೂಡಿದೆ ಎಂದು ಹೇಳಬಹುದು.

ವಿದ್ವಾನ್ ಜಿ. ವಿ. ಶಿವಸ್ವಾಮಿಯವರು ಈ ಗವೀಮಠದ ಪೂರ್ಣ ಪರಿಚಯ ಉಳ್ಳವರು. ಇಲ್ಲಿ ನಡೆಯುತ್ತಿರುವ ಧಾರ್ಮಿಕ ಮತ್ತು ವಿದ್ಯಾಭಿವೃದ್ಧಿ ಕಾರ್ಯಗಳನ್ನು ಕಣ್ಣಾರೆ ಕಂಡವರು. ಬಹುಮುಖವಾಗಿ ಶ್ರೀಗುರುಫಿರಂಗೀಶ್ವರರ ಮಹಿಮೆಯನ್ನು ಈ ಭಾಗದ ಗ್ರಾಮಗಳಲ್ಲಿ ಜನರ ಮುಖದಿಂದ ಕೇಳಿದವರು. ಆದ್ದರಿಂದ ಇವರು ಈ ಗ್ರಂಥವನ್ನು ಬರೆಯಲು ಎಲ್ಲರೀತಿಯಿಂದಲೂ ಅರ್ಹರಾಗಿದ್ದಾರೆ. ಈ ಪುಸ್ತಕವನ್ನು ಸುಲಲಿತವಾಗಿ ಕನ್ನಡದ ಶೈಲಿಯಲ್ಲಿ ಬರೆದಿರುತ್ತಾರೆ. ಈ ಮಠಕ್ಕೆ ಸಂಬಂಧಪಟ್ಟ ಸುಂದರ ಚಿತ್ರಗಳ ಪಡಿಯಚ್ಚುಗಳನ್ನು ಪ್ರಕಟಿಸಿರುವುದರಿಂದ ಗ್ರಂಥಸ್ಥ ವಿಷಯವು ಓದುಗರಿಗೆ

ಸುಲಭವಾಗಿ ಮನವರಿಕೆಯಾಗುತ್ತದೆ. ಸ್ಥಳಪುರಾಣಗಳಿಗೆ ಸಂಬಂಧಪಟ್ಟ ಇಂತಹ ಚರಿತ್ರೆಗಳನ್ನು ಆಯಾ ಭಾಗದ ಜನರು ಆಸಕ್ತಿಯಿಂದ ಓದುವುದು ಸಹಜವಾಗಿದೆ. ನಮ್ಮ ನಾಡಿನ ಪ್ರಖ್ಯಾತ ಮಠಗಳ ಚರಿತ್ರೆಗಳು ಈ ರೀತಿ ಪ್ರಕಟವಾಗುವುದು ಆವಶ್ಯಕ. ಈ ಕಾರ್ಯವನ್ನು ಮಾಡಿದ ವಿದ್ವಾನ್ ಜಿ. ವಿ. ಶಿವಸ್ವಾಮಿಗಳು ವಂದನಾರ್ಹರಾಗಿರುತ್ತಾರೆ. ಶ್ರೀ ಮಠದ ಭಕ್ತ ಮಂಡಳಿಯವರು, ಜಿಲ್ಲೆಯ ಮಹಾಜನರು, ಕನ್ನಡಿಗರು ಈ ಗ್ರಂಥವನ್ನು ಓದಿ ಇದರ ಪ್ರಯೋಜನ ಪಡೆಯುತ್ತಾರೆಂದು ನಂಬಿರುತ್ತೇನೆ.

ಸಿರಿಗನ್ನಡಂ ಗೆಲ್ಗೆ-ಬಾಳ್ಗೆ

ಬೆಂಗಳೂರು ಪಂಡಿತರತ್ನ, ಪದ್ಮಶ್ರೀ ಬಿ. ಶಿವಮೂರ್ತಿಶಾಸ್ತ್ರೀ
14-10-73

●

## ಈ ಗ್ರಂಥದ ಬಗ್ಗೆ ವಿದ್ವಾಂಸರ ಅಭಿಪ್ರಾಯ

ಅನಾದಿಕಾಲದಿಂದ ಮಾನವಕುಲದಲ್ಲಿ ಅಭಿಪ್ರಾಯಗಳು ಒಬ್ಬರಿಂದೊಬ್ಬರಿಗೆ ಹರಿಯುತ್ತಲೇ ಇವೆ. ಹಿರಿಯರ ಸಿದ್ಧಿಸಾಧನೆ ಅದರ ಪ್ರಯೋಗ ಇವುಗಳಿಂದ ಉಂಟಾಗುವ ಅನುಭವಗಳು, ಕಿರಿಯರಿಗೆ ಪರಂಪರೆಯಾಗಿ, ಕೆಲವು ಸಮಯಗಳಲ್ಲಿ ಜ್ಞಾಪಕಗಳಾಗುತ್ತವೆ. ಅನೇಕವೇಳೆ ಪ್ರೇರಕಗಳಾಗಿ ಕರ್ತವ್ಯವನ್ನು ನಡೆಸುತ್ತವೆ. ಈ ಕಾರಣದಿಂದ ಹಿಂದಿನವರ ಅನುಭವಗಳು ಹಾಗೂ ಅಭಿಪ್ರಾಯಗಳು ಮುಂದಿನ ಪೀಳಿಗೆಗೆ ಅತ್ಯಾವಶ್ಯಕಗಳಾಗಿರುತ್ತವೆ.

ಹಿಂದೆ ಮುದ್ರಣ ಸೌಕರ್ಯಗಳು ಇಲ್ಲದಿರುವಾಗಲೂ ಶಾಸನಗಳೂ ಓಲೆಗರಿಗಳ ದಾಖಲೆಗಳೂ ಅಭಿಪ್ರಾಯಗಳ ನದಿಗಳಾಗಿ ಹರಿಯುತ್ತಿದ್ದವು. ಈಗಿನ ಸೌಕರ್ಯಗಳನ್ನನುಸರಿಸಿ, ಇಂದಿನವರು ಅದೇ ಅಭಿಪ್ರಾಯಗಳನ್ನು ಮುಂದಿನವರಿಗೆ ತಿಳಿಯಪಡಿಸಲು ಪ್ರಯತ್ನಿಸುತ್ತಿದ್ದಾರೆ. ಸರಿಯಾದ, ಕ್ರಮವಾದ ಮತ್ತು ಯೋಗ್ಯವಾದ ವಿಷಯ ಜ್ಞಾನವು ಕೆಲವರ ಮೂಲಕ ಮಾತ್ರ ಜನತೆಗೆ ಲಭ್ಯವಾಗಿದೆ. ಪ್ರಕೃತದಲ್ಲಿ ಕನ್ನಡನಾಡಿನ ಧಾರ್ಮಿಕ ಪೀಠಾಧಿ

ಕಾರಿಗಳೊಬ್ಬರಾದ ತುಮಕೂರು ಜಿಲ್ಲೆಯ ಕುಣಿಗಲ್ಲು ತಾಲ್ಲೂಕು ಅಂಕನಹಳ್ಳಿ ಶ್ರೀ ಗವೀಮಠದ ಪರಮ ತಪೋನಿಧಿಗಳೂ, ಪವಾಡ ಪುರುಷರೂ ಆದ ಶ್ರೀ ಗುರುಘಿರಂಗೀಶ್ವರರ (ಶ್ರೀ ಗುರುಘಿರಂಗಿಸ್ವಾಮಿಗಳ) ಪ್ರಭಾವ ಮತ್ತು ಪವಿತ್ರವಾದ ಅವರ ಜೀವನ ಕ್ರಮವನ್ನು ನಮ್ಮ ಯುವಜನರಿಗೆ ತಿಳಿಯ ಪಡಿಸಲು ಒಂದು ಜೀವನ ಚರಿತ್ರೆಯನ್ನು ತರುಣ ಸಾಹಿತಿಯಾದ ವಿದ್ವಾನ್ ಜಿ. ವಿ. ಶಿವಸ್ವಾಮಿಯವರು ಚಿತ್ರಿಸಲು ಪ್ರಯತ್ನಿಸಿರುತ್ತಾರೆ. ಸಮಾಜದಲ್ಲಿ ಶ್ರೀಗಳ ಜೀವನದಿಂದ ಪ್ರಭಾವಿತರಾದ ಶಿಷ್ಯ ಪರಂಪರೆ ಇದೆ. ವಿಶೇಷ ಘಟನೆಗಳು ನಡೆದುದಕ್ಕೆ ಜನಗಳ ಸ್ಮೃತಿಯಲ್ಲಿಯೇ ಉಳಿದಿರುವಂತಹ ಕಥೆಗಳಿವೆ. ಕೆಲವು ಶಾಸನಗಳಿಂದಲೂ ಈ ಮಠದ ವೈಶಾಲ್ಯ, ಜನಾನುರಾಗ, ಗೌರವಗಳೂ ನಮಗೆ ತಿಳಿದುಬರುತ್ತವೆ. ಒಬ್ಬ ವ್ಯಕ್ತಿಯ ಯೋಗ್ಯತೆಯನ್ನು ಪ್ರಭಾವವನ್ನು ನಮ್ಮಗಳ ಗಮನಕ್ಕೆ ತೆಗೆದುಕೊಳ್ಳುವುದು ಮಾತ್ರವಲ್ಲ. ಈ ಧರ್ಮಪೀಠದ ಪರಂಪರೆಯಲ್ಲಿಯೇ ಕೆಲವು ಅಸಮಾನ ವ್ಯಕ್ತಿಗಳು ಸಮಾಜಕ್ಕೆ ಧರ್ಮಶ್ರದ್ಧೆಯನ್ನು ಉಂಟುಮಾಡಿರುತ್ತಾರೆ. ಇದ್ದ ಆಚಾರ, ವ್ಯವಹಾರಗಳನ್ನು ಸಂಸ್ಕರಿಸಿರುತ್ತಾರೆ. ಇದರಿಂದ ನಮ್ಮ ಸಂಸ್ಕೃತಿಯು ಸ್ಥೈರ್ಯದಿಂದ ಮುಂದುವರಿಯಲು ಅವಕಾಶವಾಗಿದೆ. ಈ ಎಲ್ಲಾ ವಿಷಯಗಳನ್ನು ನಮ್ಮ ಯುವ ಜನಾಂಗಕ್ಕೆ ಶ್ರೀಗಳ ಜೀವನ ಚರಿತ್ರೆಯ ರೂಪದಲ್ಲಿ ತಿಳಿಯುವಂತೆ, ತಿಳಿಯಾದ ಕನ್ನಡದಲ್ಲಿ ಬರೆದು ಶ್ರೀ ಜಿ.ವಿ. ಶಿವಸ್ವಾಮಿಯವರು ಸಮಸ್ತ ಭಕ್ತಕೋಟಿಗೆ ಸಮರ್ಪಿಸಿರುತ್ತಾರೆ. ನಮ್ಮ ಔದಾಸಿನ್ಯದಿಂದ ಅನೇಕ ವಿಶಿಷ್ಟವ್ಯಕ್ತಿಗಳ ವಿಷಯಗಳು ತಿಳಿಯದೆ ಹೋಗಿವೆ. ಕಾಲಕಾಲದಲ್ಲಿ ನಮ್ಮ ಯುವಕರು ಎಚ್ಚೆತ್ತು ನಾವು ತಿಳಿಯಬೇಕಾದ ಮಹಾಪುರುಷರ, ಕ್ಷೇತ್ರಗಳ, ಧರ್ಮಪೀಠಗಳ ಚರಿತ್ರೆಗಳನ್ನು ಈಗಿನವರಿಗೆ ತಿಳಿಯುವ ರೀತಿಯಲ್ಲಿ ತಿಳಿಸಲು ಪ್ರಯತ್ನಿಸುವುದು ಜರೂರಾಗಿ ಆಗಬೇಕಾಗಿದೆ. ಶ್ರೀ ಗುರು ಘಿರಂಗೀಶ್ವರ ಚರಿತ್ರೆಯು ಜನಸಾಮಾನ್ಯರಿಗೆ ಒಂದು ಜ್ಞಾನದೀವಿಗೆಯಾಗಲೆಂದು ಆಶಿಸುತ್ತೇನೆ.

ಡಾ|| ವೀರರಾಘವಾಚಾರ್
ಪ್ರಾಧ್ಯಾಪಕರು, ಹಾಗೂ ಅಧ್ಯಕ್ಷರು
ಸರ್ಕಾರಿ ಸಂಸ್ಕೃತ ಕಾಲೇಜು,

ತಾ|| 4-11-1973
ಬೆಂಗಳೂರು-18.

# ಅರಿಕೆ

ಕರ್ನಾಟಕ ದೇಶದ ಧಾರ್ಮಿಕೇತಿಹಾಸದಕಡೆ ಕಣ್ಣಾಡಿಸಿದರೆ, ಪ್ರತಿಯೊಂದು ಪುಟವೂ ವಿಭೂತಿ ಪುರುಷರ ಪವಿತ್ರ ಚರಿತ್ರೆಗಳಿಂದ ತುಂಬಿಕೊಂಡಿರುವುದು ವೀರಶೈವ ಸಮಾಜದ ಹಿರಿಮೆಗೆ ದ್ಯೋತಕವಾಗಿದೆ. ಶ್ರೀ ರೇಣುಕಾದಿ ಪಂಚಾಚಾರ್ಯರೂ, ಬಸವಾದಿ ಶಿವಶರಣರೂ, ಮಾಡಿರುವ ಮಹತ್ ಕಾರ್ಯಗಳ ಬಗ್ಗೆ ವರ್ಣಿಸಲು ಮಾನವನಿಗೆ ಶಬ್ದಗಳೇಸಾಲವು.

ಹದಿನೇಳನೆಯ ಶತಮಾನದಲ್ಲಿ ಅನೇಕ ಶಿವಯೋಗಿಗಳು ಆಗಿಹೋಗಿದ್ದಾರೆ. ಆ ಪರಂಪರೆಯ ಕಡೆ ನೋಡಿದಾಗ ನಮಗೆ ತಿಳಿದು ಬರುವವರಲ್ಲಿ ತುಮಕೂರು ಜಿಲ್ಲೆಯ ಕುಣಿಗಲ್ ತಾಲ್ಲೂಕು, ಅಂಕನಹಳ್ಳಿ ಗವೀಮಠದ ಮಹಾ ಶಿವಯೋಗಿ ಶ್ರೀ ಗುರುಫಿರಂಗೀಶ್ವರರು ಓರ್ವರು. ಈ ಮಹಾನುಭಾವರು ಅನೇಕ ಪಟ್ಟಣ, ಗ್ರಾಮಗಳನ್ನು ಸಂದರ್ಶಿಸಿ ಜನರಿಗೆ ಧರ್ಮವನ್ನು ಉಪದೇಶಿಸಿರುತ್ತಾರೆ. ಈ ಪೂಜ್ಯರು ಮಹಾಸಿದ್ಧಿ ಪುರುಷರೂ, ಪವಾಡಪುರುಷರಾಗಿ ಮೆರೆದು, ಉಚ್ಚ - ನೀಚರೆನ್ನದೆ ಎಲ್ಲಾ ವರ್ಗದ ಶಿಷ್ಯರನ್ನು ಉದ್ಧಾರ ಮಾಡಿರುವುದು ಅವರ ಚರಿತ್ರೆಯಿಂದಲೇ ತಿಳಿದುಬರುತ್ತದೆ

ಶ್ರೀ ಗಳವರ ಅಂತರಂಗ ಬಹಿರಂಗದಲ್ಲಿ ನಡೆಸಿದ ಚಿಂತನೆ ಆಧ್ಯಾತ್ಮಿಕ ದರ್ಶನ. ಪೂಜ್ಯರು ಅಲ್ಪಜ್ಞಾನದಿಂದ ದಿವ್ಯಜ್ಞಾನದವರೆಗೆ, ಪರಮಾಣುವಿನಿಂದ ಪರಮಾತ್ಮನವರೆಗೆ ಗುರುತಿಸಲಾಗದ ವಿಷಯಗಳಿಲ್ಲ. ಮಾಡಲಾಗದ ಕಾರ್ಯಗಳಿಲ್ಲ. ಅವರು ತಮ್ಮ ತಪಃಶಕ್ತಿಯನ್ನು ಲೋಕ ಕಲ್ಯಾಣಕ್ಕಾಗಿ ಧಾರೆ ಎರೆದ ಮಹಾನುಭಾವರು.

ಈ ಮಹಾತ್ಮರ ಚರಿತ್ರೆಯನ್ನು ರಚಿಸಲು ನನಗೆ ಮೊದಲು ಪ್ರೇರೇಪಣೆ ದೊರೆತದ್ದು ಹೀಗೆ: ಶ್ರೀ ಹಿರೇಕಲ್ ಚನ್ನಬಸವ ಶಿವಯೋಗಿಗಳ ಜೀವನ ಚರಿತ್ರೆಯ ಸಂಪಾದಕಕಾರ್ಯವನ್ನು ಸಾಹಿತಿಗಳಾದ ಡಾ. ಸಾ. ಶಿ. ಮರುಳಯ್ಯ, ಎಂ. ಎ. ಅವರೂ ನಾನು ಮಾಡುತ್ತಿರುವಾಗ ಆ ಗ್ರಂಥದಲ್ಲಿ "ಶ್ರೀ ಫಿರಂಗೀ ಸ್ವಾಮಿಗಳ" ವಿಷಯ ಉಲ್ಲೇಖನ ಇರುವುದನ್ನು ಓದಿದ ನಾನೇ

ಈ ಕಾರ್ಯವನ್ನು ಮಾಡಬೇಕೆಂದು ಯೋಚಿಸಿದೆ. ಅನಂತರ ಗವಿಮಠಾಧ್ಯಕ್ಷರಾದ ಶ್ರೀ ಸಿದ್ಧಲಿಂಗ ಶಿವಾಚಾರ್ಯ ಸ್ವಾಮಿಗಳವರಲ್ಲಿ ಅರಿಕೆ ಮಾಡಿಕೊಂಡೆ. ಶ್ರೀಗಳು ಗವೀಮಠದ ಕೆಲವು ವಿಷಯಗಳನ್ನು ಹೇಳಿ, ಕುಣಿಗಲ್ ಸಮೀಪದಲ್ಲಿರುವ ಮೂಲಗವೀಮಠಕ್ಕೆ ನನ್ನನ್ನು ಕರೆದುಕೊಂಡು ಹೋಗಿ ಆ ಸ್ಥಳದ ಹಿರಿಯರನ್ನು ಪರಿಚಯ ಮಾಡಿಸಿ ಅವರಿಂದ ಪಂಚಗವಿಮಠಗಳ ಹಾಗೂ ಶ್ರೀ ಗುರುಘಿರಂಗೀಶ್ವರರ ವಿಷಯವನ್ನು ಸೂಕ್ಷ್ಮವಾಗಿ ಅರಿವುಮಾಡಿಸಿ ಕೊಟ್ಟರು. ಇದರಿಂದ ನನಗೆ ಮತ್ತಷ್ಟು ಕುತೂಹಲ ಉಂಟಾಯಿತು. ಶ್ರೀಗಳ ವಿಷಯಗಳನ್ನು ನಾನು ಸಂಪೂರ್ಣ ಸಂಗ್ರಹಿಸಬೇಕೆಂದು ನಿರ್ಧರಿಸಿ ಕುಣಿಗಲ್, ಮಾಗಡಿ, ರಾಮನಗರಂ ತಾಲ್ಲೂಕುಗಳ ಕೆಲವು ಗ್ರಾಮಗಳಲ್ಲಿ ಸಂಚಾರ ಮಾಡಿ ದಂತಕಥೆಗಳ ರೂಪದಲ್ಲಿ ಪ್ರಚಾರದಲ್ಲಿ ಇದ್ದ ಶ್ರೀ ಗುರುಘಿರಂಗೀಶ್ವರರ ಮಹಿಮೆಯನ್ನು ಸಂಗ್ರಹಿಸಿ, ಒಂದು ಕರಡು ಪ್ರತಿಯನ್ನು ತಯಾರು ಮಾಡಿದೆ.

ದಿನಾಂಕ 2-11-1971ರಂದು ಕುಣಿಗಲ್ ತಾಲ್ಲೂಕು ಮೂಲಗವೀಮಠದಲ್ಲಿ ನೆರವೇರಿದ ಶ್ರೀ ರೇವಣಸಿದ್ಧೇಶ್ವರಲಿಂಗ ಪ್ರತಿಷ್ಠಾಪನ ಮಹೋತ್ಸವದ ಸಂದರ್ಭದಲ್ಲಿ ಸಿದ್ಧಗಂಗಾ ಮಠಾಧ್ಯಕ್ಷರಾದ ಪೂಜ್ಯ ಶ್ರೀ ಶಿವಕುಮಾರ ಸ್ವಾಮಿಗಳವರ ಅಧ್ಯಕ್ಷತೆಯಲ್ಲಿ ನಡೆದ ಸಭೆಯಲ್ಲಿ "ಮೂಲಗವೀಮಠದ ಇತಿಹಾಸ ಹಾಗೂ ಶ್ರೀ ಗುರುಘಿರಂಗೀಶ್ವರ ಮಹಿಮೆಯನ್ನು" ಕುರಿತು ನಾನು ಮಾಡಿದ ಭಾಷಣವನ್ನು ಕೇಳಿದ ಶ್ರೀ ಮಠದ ಶಿಷ್ಯ ಮಂಡಳಿಯವರು ನೀವು ಶ್ರೀ ಗುರುಘಿರಂಗೀಶ್ವರರ ಚರಿತ್ರೆಯನ್ನು ಗ್ರಂಥ ರೂಪದಲ್ಲಿ ತರಬೇಕೆಂದು ಅಪೇಕ್ಷೆಪಟ್ಟು ಉತ್ತೇಜನ ನೀಡಿದ್ದರಿಂದ ಈ ಚರಿತ್ರೆಯು ಹೊರಬರಲು ಕಾರಣವಾಯಿತು.

ಈ ಚರಿತ್ರೆಯ ಪ್ರಕಟಣೆ ಕಾರ್ಯಕ್ಕೆ ಕೆಲವು ಮಹನೀಯರು ನೆರವಾಗಿದ್ದಾರೆ. ಶ್ರೀ ಖಂಡೆಮಠದ ಶ್ರೀಗಳು, ಅಸಿಸ್ಟೆಂಟ್ ಇಂಜನಿಯರುಗಳಾದ ಶ್ರೀ ಹೆಚ್. ಎಸ್. ಸಿದ್ಧಲಿಂಗಯ್ಯ ಬಿ. ಇ., ಅವರು, ಶ್ರೀ ಎ. ವಿ. ಸೋಮಶೇಖರಯ್ಯನವರು, ಶ್ರೀ ಸಿದ್ಧಲಿಂಗಸ್ವಾಮಿ ಅವರು, ಬೆಂಗಳೂರಿನ ವರ್ತಕರಾದ ಶ್ರೀ ಎನ್. ಸಿ. ಸಿದ್ದಲಿಂಗಪ್ಪನವರು, ಮಾಜಿಶಾಸಕರಾದ ಶ್ರೀಸೋಲೂರು ಸಿದ್ದಪ್ಪನವರು, ಎಸ್.ವಿ.ಎಸ್. ವಿದ್ಯಾಲಯದ ಶ್ರೀ ಎನ್.

ರಾಜಶೇಖರಯ್ಯ, ಬಿ. ಎ., ಅವರು ಶರಣೆ ಹೆಚ್. ಆರ್. ಸ್ವರ್ಣ ಅವರು ಹಾಗೂ ಮುಖಚಿತ್ರ ಬರೆಯಲು ನೆರವಾದ ಜಾಲಮಂಗಲದ ಶ್ರೀ ಒಡೇರ ಬಸವಲಿಂಗಯ್ಯನವರಿಗೂ, ಶ್ರೀ ಶಾಂತಯ್ಯನವರಿಗೂ ನನ್ನ ಕೃತಜ್ಞತೆಗಳು.

ಚರಿತ್ರೆಯನ್ನು ಪರಾಮರ್ಶಿಸಿ, 'ಸಂದೇಶವನ್ನು' ಅನುಗ್ರಹಿಸಿದ ಸಿದ್ಧಗಂಗಾ ಮಠಾಧೀಶ್ವರರಾದ ಪೂಜ್ಯ ಡಾ|| ಶ್ರೀ ಶಿವಕುಮಾರಸ್ವಾಮಿಗಳ ವರಿಗೆ ನನ್ನ ಶಿರ ಸಾಷ್ಟಾಂಗ ನಮಸ್ಕಾರಗಳು. ಮುನ್ನುಡಿಯನ್ನು ಬರೆದುಕೊಟ್ಟ ಪ್ರಸಿದ್ಧ ಸಾಹಿತಿಗಳಾದ ಪಂಡಿತರತ್ನ, ಪದ್ಮಶ್ರೀ ಬಿ. ಶಿವಮೂರ್ತಿಶಾಸ್ತ್ರಿಗಳ ವರಿಗೂ, ಹಾಗೂ ಅಭಿಪ್ರಾಯವನ್ನು ಬರೆದುಕೊಟ್ಟ ಡಾ|| ವೀರರಾಘವಾ ಚಾರ್ ಅವರಿಗೂ ವಂದನೆಗಳು. ವಿಶೇಷವಾಗಿ ನನಗೆ ನೆರವಾಗಿ ನನ್ನ ಸಂಶಯುಗಳನ್ನು ಪರಿಹರಿಸಿದ ಬೆಂಗಳೂರು ಗೌ|| ಸಂಸ್ಕೃತ ಕಾಲೇಜಿನ ವೇದಾಂತ ಪ್ರೊಫೆಸರ್ ಆದ ಮಾಹೇಶ್ವರಾಚಾರ್ಯ, ವೇ|| ಶ್ರೀ ಟಿ. ಆರ್. ವಿಲೋಚನಶರ್ಮ ಅವರಿಗೂ ನಾನು ಚಿರಋಣಿಯಾಗಿರುತ್ತೇನೆ.

ಪ್ರಕಟಣೆ ಕಾರ್ಯದಲ್ಲಿ ನೆರವಾದ 'ಕನ್ನಡ ನಿಘಂಟು' ಸಂಪಾದಕರಾದ ಶ್ರೀ ಹೀ. ಚಿ. ಶಾಂತವೀರಯ್ಯ, ಅವರಿಗೂ ಕರಡನ್ನು ತಿದ್ದುವುದರಲ್ಲಿ ನೆರವಾದ ಸಂಸ್ಕೃತ ಕಾಲೇಜಿನ ಅಧ್ಯಾಪಕರಾದ ಶ್ರೀ ಎನ್. ಕೆ. ನೀಲಕಂಠಾ ರಾಧ್ಯ, ಎಂ.ಎ, ಬಿ.ಇಡಿ. ಅವರಿಗೂ ಕೊನೆಯದಾಗಿ ಚರಿತ್ರೆಯನ್ನು ಅಂದ ವಾಗಿ ಮುದ್ರಿಸಿಕೊಟ್ಟ ಯುಗಾಂತರ ಮುದ್ರಣಾಲಯದ ಶ್ರೀ ನಾಗರಾಜ್ ಅವರಿಗೂ ನನ್ನ ವಂದನೆಗಳು.

ಮಹಾ ಪುರುಷರು ಮೆಟ್ಟಿದ ಕನ್ನಡನಾಡು ಪಾವನ, ಅವರು ತುಳಿದ ಮರಳು ಮಾಣಿಕ್ಯ, ಅವರನುಡಿ ಶಿವನಿಗೆ ಆಪ್ಯಾಯ, ಅವರ ದರ್ಶನ ಭವನಾಶ. ಅಂತಹ ಪರಮ ಪಾವನ ಮಹಿಮರಾದ ಪಂಚಗವೀಮಠದ ಶ್ರೀ ಗುರು ಘಿರಂಗೀಶ್ವರ ಚರಿತ್ರೆಯನ್ನು ಸಜ್ಜನರ ಮುಂದೆ ಇರಿಸಿದ್ದೇನೆ. ಸಹೃದಯರಿಗೆ ಈ ಚರಿತ್ರೆಯು ಭಕ್ತಿಭಾವನೆಯನ್ನು ಮೂಡಿಸುವುದರಲ್ಲಿ ಯಾವ ಸಂದೇಹವೂ ಇಲ್ಲ. ಶ್ರೀ ಗುರುವಿನ ಚರಣದಲ್ಲಿ ಅನಂತ ನಮಸ್ಕಾರಗಳನ್ನು ಅರ್ಪಿಸಿ ವಿರಮಿ ಸುತ್ತೇನೆ. ವಾಚಕರು ಮುದ್ರಣ ದೋಷಗಳನ್ನು ಕ್ಷಮಿಸಬೇಕೆಂದುಕೋರುವೆ.

5-11-72 ಜಿ. ವಿ. ಶಿವಸ್ವಾಮಿ
ಬೆಂಗಳೂರು

# ಚರಿತ್ರೆಯಲ್ಲಿ


| | | ಪುಟ |
|---|---|---|
| 1 | ಸಂದೇಶ | iii |
| 2 | ಮುನ್ನುಡಿ | iv |
| 3 | ವಿದ್ವಾಂಸರ ಅಭಿಪ್ರಾಯ | vii |
| 4 | ಅರಿಕೆ | ix |
| 5 | ಶ್ರೀ ಗವಿಮಠದ ಪ್ರಾಚೀನತೆ | 1 |
| 6 | ಶಿಲಾಪೀಠದ ಮಹಿಮೆ | 15 |
| 7 | ಬಾಳೆಹಣ್ಣು ಬಳಿಗೆ ಬಂದುದು | 17 |
| 8 | ಪಂಚ ಮಠಗಳ ಪ್ರತಿಭೆ | 20 |
| 9 | ಶ್ರೀ ಮೂಲ ಗವೀಮಠ | 21 |
| 10 | ಎಲಗಲಹಳ್ಳಿ ಗವೀಮಠ | 23 |
| 11 | ಹೂಲೀಕಟ್ಟೆ ಗವೀಮಠ | 25 |
| 12 | ತಾವರೆಕೆರೆ ಗವೀಮಠ | 27 |
| 13 | ವಿರುಪಸಂದ್ರ ಗವೀಮಠ | 29 |
| 14 | ಅಂಕನಹಳ್ಳಿ ಗವೀಮಠ | 30 |
| 15 | ಅಂಟುರೋಗ ನಿವಾರಣೆ | 32 |
| 16 | ಶ್ರೀ ಮಠದ ಜೀರ್ಣೋದ್ಧಾರ | 37 |
| 17 | ಶಿಶುವಿನ ಉದ್ಧಾರ | 38 |
| 18 | ಗಾರುಡಿಗರಿಗೆ ತತ್ವೋಪದೇಶ | 42 |
| 19 | ಅಧಿಕಾರಿಗಳಿಗೆ ನೀತಿಬೋಧೆ | 47 |
| 20 | ನಾಗರಸನಿಗೆ ಅನುಗ್ರಹ | 50 |
| 21 | ಶಿವಯೋಗ | 52 |
| 22 | ಶ್ರೀಗಳ ಯೋಗ ಸಮಾಧಿ | 56 |
| 23 | ಶ್ರೀ ಸಿದ್ಧಲಿಂಗ ಶಿವಾಚಾರ್ಯ ಸ್ವಾಮಿಯವರು | 59 |
| 24 | ಶ್ರೀಗಳ ವಾಣಿ | 68 |
| 25 | ಶ್ರೀ ಫಿರಂಗೀಶ್ವರ ಸ್ವಾಮಿ ಪ್ರಶಸ್ತಿಃ | 71 |
| 26 | ಶ್ರೀ ಫಿರಂಗೀಶ್ವರ ಮಹಾಸ್ವಾಮಿಗಳು | 73 |
| 27 | ಬೋಧಿಸೆನ್ನ ಗುರುವೆ | 75 |
| 28 | ಶ್ರೀ ಗುರು ವಚನೋಪದೇಶ ಮುಂತಾದ ಹಾಡುಗಳು | 76–80 |

ಮುಖಚಿತ್ರ :–ಶ್ರೀ ಗುರು ಫಿರಂಗೀಶ್ವರರು



ಅಂಕನಹಳ್ಳಿ ಶ್ರೀ ಗವಿ ಮಠದಲ್ಲಿರುವ ಶ್ರೀ ಗುರು ಫಿರಂಗೀಶ್ವರರ ಗದ್ದುಗೆ



ಆಂಕನಹಳ್ಳಿ ಶ್ರೀ ಗವಿಮಠದಲ್ಲಿ ಶ್ರೀ ಫಿರಂಗೀಶ್ವರರ ಮತ್ತು ಇತರ ಶ್ರೀಗಳವರ ಗದ್ದುಗೆಗಳು

ಶ್ರೀ ಗವಿಮಠದ ಒಳದೃಶ್ಯ

॥ ಶ್ರೀ ಗುರು ಫಿರಂಗೀಶ್ವರ ಪ್ರಸನ್ನ ॥

# ಶ್ರೀ ಗವಿಮಠದ
# ಶ್ರೀ ಗುರು ಫಿರಂಗೀಶ್ವರ ಚರಿತ್ರೆ

**ಶ್ರೀ ಪಂಚಗವ್ಯಾಖ್ಯ ಮಠಾಧಿನಾಥಃ**
**ಫಿರಂಗಿ ನಾಮ್ನಾ ವಿದಿತೋಜಗತ್ಯಾಂ ।**
**ಪ್ರಚಾರಯಾಮಾಸ ಧರಾತಲೇಽಸ್ಮಿನ್**
**ತತ್ವಂ ಶಿವಾದ್ವೈತಮತೀವ ಪುಣ್ಯಂ ॥**

ಭರತಖಂಡವು ಧರ್ಮ ಸಂಸ್ಕೃತಿಯ ತವರುಮನೆ. ಈ ಪರಂಪರೆಗೆ ಹೆಸರಾದ ಕರ್ನಾಟಕ ದೇಶವು ಅನೇಕ ಮಠಾಚಾರ್ಯರಿಗೂ, ಶಿವಶರಣರಿಗೂ ಜನ್ಮ ಭೂಮಿಯೂ, ಪುಣ್ಯ ಭೂಮಿಯೂ ಆಗಿದೆ. ಈ ನಾಡಿನ ತಪೋಧನರು ವೇದ ಶಿವಾಗಮೋಪನಿಷತ್ತುಗಳ ಸಾರಸರ್ವಸ್ವವನ್ನು ಕನ್ನಡ ನುಡಿಯ ಮುಖೇನ ಜನ ಸಾಮಾನ್ಯರ ಕಲ್ಯಾಣಕ್ಕಾಗಿ ಪ್ರಚಾರ ಮಾಡಿದವರಲ್ಲಿ ಎಡೆಯೂರು ಶ್ರೀ ಸಿದ್ಧಲಿಂಗೇಶ್ವರರು, ಗುಬ್ಬಿ ಶ್ರೀ ಚನ್ನಬಸವೇಶ್ವರರು, ಕುಪ್ಪೂರು ಪೀಠದ ಮರುಳ ಸಿದ್ಧೇಶ್ವರರು, ಬೆಟ್ಟಹಳ್ಳಿ ಮಠದ ಉರಿಲಿಂಗೇಶ್ವರರು, ಇವರಂತೆ ಕುಣಿಗಲ್ ತಾಲ್ಲೂಕು ಗವಿಮಠದ ಪರಮತಪೋನಿಧಿ ಸದ್ಗುರು ಶ್ರೀ ಫಿರಂಗೀಶ್ವರರೆಂದು ವಿಖ್ಯಾತರಾದ ಶ್ರೀ ಸಿದ್ಧವೀರಸ್ವಾಮಿಗಳೂ ಓರ್ವರು.

ಭರತಖಂಡವು ಶಿವಕ್ಷೇತ್ರಗಳ ತವರುಮನೆ. ಶಿವೋಪಾಸಕರ ಸಿದ್ಧಿಯ ಕೇಂದ್ರವಾಗಿ ಪ್ರಸಿದ್ಧಿ ಪಡೆದಿದೆ. '1' ಹಿಂದಿನ ವೀರಶೈವ ಮತಸ್ಥಾಪಕರಾದ ಜಗದ್ಗುರು ರೇಣುಕಾದಿ ಪಂಚಾಚಾರ್ಯರು, ಶಿವಶರಣರು, ಭರತಖಂಡದಲ್ಲಿ ಎಲ್ಲಾ ಕಡೆ ಪ್ರವಾಸಮಾಡಿ ಸರ್ವರ ಹೃದಯ ಭೂಮಿಯಲ್ಲಿ ಶಿವಭಕ್ತಿ ಬೀಜವನ್ನು ಬಿತ್ತಿದರು. ಈ ಮಹಾತ್ಮರ ಉಪದೇಶ ಪ್ರಭಾವದಿಂದ ಭರತ

'1' ವೀರಶೈವ **ರತ್ನ ಪು.** 2

ಖಂಡದಲ್ಲಿ ಶಿವಭಕ್ತಿಯು ಸರ್ವತ್ರ ವ್ಯಾಪಿಸಿತು. ಈ ವಿಭೂತಿ ಪುರುಷರ ಕಾಲದಲ್ಲಿ ಎಲ್ಲಿ ನೋಡಿದರೂ ಶಿವಭಕ್ತಿಯ ಜಯಕಾರವೆ! ಎಲ್ಲಿ ನೋಡಿದರೂ ಶಿವಲಿಂಗಗಳ ಸ್ಥಾಪನೆಯೆ! ಎಲ್ಲಿ ನೋಡಿದರೂ ಶಿವಪೂಜಾವೈಭವವೆ! ಎಲ್ಲಿ ನೋಡಿದರೂ ಧರ್ಮ ಪ್ರಚಾರಕ್ಕಾಗಿ ಮಠ ಮಂದಿರಗಳ ಸ್ಥಾಪನೆಯೆ! ಎಲ್ಲಿ ನೋಡಿದರೂ ಶಿವಮಂತ್ರ ಜಪವೆ! ನಗರಗಳಲ್ಲಿಯೂ, ನಾಲ್ಕು ಮನೆಯ ಹಳ್ಳಿಯಲ್ಲಿಯೂ ಶಿವಮಂದಿರಗಳೆ! ಪಟ್ಟಣಗಳಲ್ಲಿಯೂ ಶಿವಮಂದಿರಗಳೆ! ಜನ ಸಂಚಾರ ಶೂನ್ಯವಾದ ಅರಣ್ಯಗಳಲ್ಲಿಯೂ, ಗಿರಿಶಿಖರಗಳಲ್ಲಿಯೂ, ಗವಿ ಗಹ್ವರಗಳಲ್ಲಿಯೂ, ನದಿ ನದೀತೀರಗಳಲ್ಲಿಯೂ ಶಿವಮಂದಿರಗಳೆ! ಎಲ್ಲಿ ನೋಡಿದರೂ ಶಿವಮಂದಿರಗಳೆ! ಶಿವಮಂದಿರಗಳು. ಆದುದರಿಂದಲೇ ಶ್ರುತಿಗಳು "ಧಿಗ್ಭಸ್ಮರಹಿತಂ ಫಾಲಂ ಧಿಗ್ಗ್ರಾಮ ಶಿವಾಲಯಂ" ಅಂದರೆ ಭಸ್ಮವಿಲ್ಲದ ಹಣೆಗೂ, ಶಿವಾಲಯವಿಲ್ಲದ ಗ್ರಾಮಕ್ಕೂ ಧಿಕ್ಕಾರವಿರಲೆಂದು ಸಾರಿರುವುವು. ಭರತಖಂಡದಲ್ಲಿ ಇರುವಷ್ಟು ಮಠ ಮಂದಿರಗಳು ಶಿವಾಲಯಗಳು, ಇನ್ನಾವ ದೇಶದಲ್ಲಿಯೂ ಇಲ್ಲವೆಂದು ಹೇಳಿದರೆ ಅತಿಶಯೋಕ್ತಿಯಾಗಲಾರದು. ಆದ್ದರಿಂದ ಈ ಗವಿಮಠವು ಕೂಡ ಆ ಕಾಲದಲ್ಲಿಯೇ ಸ್ಥಾಪಿತವಾಗಿರಬಹುದೆಂದು ಹೇಳಬಹುದು. ಅಂದಿನ ಆಚಾರ್ಯರ, ಶರಣರ, ತಪೋಭೂಮಿ ಗಿರಿ—ವನ ಪ್ರದೇಶಗಳಲ್ಲಿರುವ ಗವಿಗಳೇ ಆಗಿದ್ದುವು. ಅನೇಕ ಶಾಸನಗಳಲ್ಲಿಯೂ, ಪ್ರಾಚೀನ ಗ್ರಂಥಗಳಲ್ಲಿಯೂ ಸಾಕಷ್ಟು ಆಧಾರಗಳು ದೊರೆಯುತ್ತವೆ. ದೊರೆತ ಆಧಾರಗಳಿಂದ 'ಗವಿಮಠ' ಎಂಬ ಪದ ವಿವರಣೆಯನ್ನು ಇಲ್ಲಿ ಕೊಡಲಾಗಿದೆ.

ಗವಿಯಾಕಾರದಲ್ಲಿರುವ ಅಥವಾ ಗವಿಯಲ್ಲಿಯೇ ಇರುವ ಮಠಕ್ಕೆ ಗವಿ ಮಠವೆಂದು ಕರೆಯುತ್ತಾರೆ. ಗವಿ+ಮಠ=ಗವಿಮಠ.

ಗವಿ: (ನಾ) 1. ಬೆಟ್ಟಗಳಲ್ಲಿ ಇರುವ ಅಥವಾ ತಪ್ಪಲಿನಲ್ಲಿರುವ ಸಹಜವಾದ ದೊಡ್ಡ ಬಿಲ. 2. ವಿರಕ್ತ ಮುನಿ, ತಪಸ್ವಿ, ಋಷಿಗಳ ಶಿವಯೋಗಿ ಸಾಧಕರ, ಕಾಡುಮೃಗಗಳ ಆಶ್ರಯ ಸ್ಥಾನವಾಗಲು ಅರ್ಹವಾದ ಸ್ಥಾನ ಬಂಡೆಯಪೊಟರೆ, ಬಿರುಕು ಗುಹೆ: ಕಂದರ (3) ನೆಲ, ಆಶ್ರಯಸ್ಥಾನ: 'ಹಕ್ಕೆಗವಿಗರುಡಿಯಾಡಂ ಬೊಲಂ ಗೊತ್ತುನೆಲೆಯಕ್ಕು' (ಶಬ್ದಿಕೈ 63) ಗವಿ ಗರುಡಿಗೊತ್ತು ನೆಲೆ ಪೊಳ ಲಿಕ್ಕಹಕ್ಕ ಚಾವಡಿ ತಾಣ ಬೀಡೆಂಬು ಬಳಿಕೆ ಯಾಡಂಬುಬೊಲನೆ ನೆಲ್ಕೆಯಾಶ್ರಯನಾಮ(ಶಬ್ದಮಃ ೫೪) ಕಂಡಿ, ತೂಕು

ಕಣಿ, ಕಣಿವೆ. (ಕಂ ಸು. ಹು 81) (4) ಶಿವಗಂಗೇ ಮೇಲಣ ಗವೀಬಗೆಯ ಸಿದ್ಧವೀರಣ ಪೊಡೇರ (ಎ ಕ. viii 93–5–1615) ಮೇಲಣ ಗವಿ ಬಸವ ಲಿಂಗದೇವರಶಿಷ್ಯರು ಬಸವಲಿಂಗದೇವರಿಗೆ(ಎ.ಕ.vii ಶಿವಮೊ 29-6-1712) ಇನ್ನೂ ಅನೇಕ ಅರ್ಥಗಳಲ್ಲಿ ಗವಿಶಬ್ದ ಉಪಯೋಗಿಸಲಾಗಿದೆ.[5]

ಮಠ: (ನಾ) ವಿವರಣೆ, (1) ಸಂನ್ಯಾಸಿಗಳು, ವಿರಕ್ತರು, ಗುರುಗಳು ವಾಸಿಸುವ ಮನೆ, ಮಠಾಚಾರ್ಯರ ಪರಂಪರಾಗತವಾದ ವಾಸಭವನ, ಗುರು ಗಳೂ, ಶಿಷ್ಯರೂ, ಸಂನ್ಯಾಸಿಗಳೂ, ಬ್ರಹ್ಮಚಾರಿಗಳೂ ಇಂಥವರ ವಾಸಸ್ಥಳ ಮಠ, ಯತಿಸ್ಥಳ (ಸಿದ್ಧಾಂತಿ 89) ಅರಿವಿಗೂ ಮರೆವಿಗೂ ಒಡೆಯಲಾಯಿತ್ತೆ ಲಿಂಗಘಟದೊಳಗಣ ಜ್ಯೋತಿ ಮಠಕ್ಕುಂಟೆ? (ವೋಳಿಮಾ. 1-3) ಸತ್ಯ ಸದ್ಭಕ್ತರ ಮಠವನರಿಸಿಕೊಂಡು ಹೋಗಿ ಲಿಂಗ ಮುಂತಾಗಿ ಭಕ್ತಿಭಿಕ್ಷವ ಬೇಡುವೆ (144–133 ಅಕಂಡ)

ಮಠ: (ಸ) (ಪು–ನ) ಆಶ್ರಮಸ್ಥಾನ, ಯತಿ, ಬ್ರಹ್ಮಚಾರಿ ಮೊದ ಲಾದವರು ಇರುವ ಆಶ್ರಮ, ಪಾಠಶಾಲೆ, ಬುದ್ಧರ ವಿಹಾರ, ಪಾಠಶಾಲೆ, ಸ್ವಾಮಿಗಳ ಮಠ (ಸಂ. ಶ. ಪು 301)

ಮಠ: (ಸಂ) ಗುಡಿಸಲು, ಅನ್ನ ಕೊಡುವ ಸ್ಥಳ, ದೇವರ ಗುಡಿ, ಸನ್ಯಾಸಿಗಳ ಮನೆ. 'ತುಟೀಕಟ್ಟಿದ ಮೇಲೆ ಮಠದ ಭೋಜನವೇಕೆ?' (ಗಾದೆ) ಪಂಚಭೂತಗ್ರಾಮ (ಆಲಂ) ಎಂಟು ಹಿಟ್ಟು ಪಂಚಮಠ ಉಂಟು ಧರೆಯ ಮೇಲೆ ನರಸು ರಾವಿಗಳಿಗೆ ಸಭಾರವಹೊತ್ತು ಬಂದೈದಾರೆ (ಅವಚ 394) ಮಠಗಳನ್ನು ಸ್ಥಾಪಿಸಿ ಧರ್ಮಪ್ರಚಾರ ಮಾಡಿದ ಆಚಾರ್ಯರ ಕಾರ್ಯಸಾಮಾನ್ಯವಲ್ಲ (ಧರ್ಮಸಾ. 151) ಹೀಗೆ ಮಠ ಶಬ್ದವನ್ನು ಉಪಯೋಗಿಸಿರುವುದನ್ನು ಕಾಣಬಹುದು.

ವೀರಶೈವ ಮಠಗಳು: ತ. ಸು. ಶಾಮರಾಯರು ಬರೆದಿರುವ ಪ್ರಬಂಧ

---

5. ಗವಿ: ಗವಿಯು ಗರುವರು ನೂಕಿದರು ತೇಜಿಗಳ ನೋಜೆಯಲಿ(ಕುವ್ಯಾಭಿ 4–50)

ಗವಿ: (6) ಆಕ್ರಮಿಸುವಿಕೆ, ಮೇಲೇರಿ ಹೋಗುವಿಕೆ, ಶತ್ರುಗಳ ಆಕ್ರಮಿಸುವ ಶಕ್ತಿ, ದಿಟ್ಟತನದಿಂದ ಮುಂದೆ ನುಗ್ಗುವ ಸಾಮರ್ಥ್ಯ (ವ್ಯಾಪನೆ, ಘಟ್ಟನಿ–211)

ದಲ್ಲಿ, ಗವಿಮಠ: ಒಂದು ವೀರಶೈವ ಮಠ ಎಂದು ಹೇಳಿರುತ್ತಾರೆ. ಮಠ ಶಬ್ದಕ್ಕೆ ಅನೇಕ ವಿವರಣೆಗಳಿವೆ.

ಮಠಮಾನ್ಯ: (ನಾ) 1. ಮಠದಲ್ಲಿ ಧರ್ಮಕಾರ್ಯಗಳು ನಡೆಯಲೆಂದು ಕೊಡುವ, ತೆರಿಗೆಯಿಂದ ವಿನಾಯಿತಿ ಹೊಂದಿರುವ ಭೂಮಿ, ಹೊಲಗದ್ದೆ, ಮೊದಲಾದವು ದತ್ತಿಯಾಗಿಬಿಟ್ಟಿರುವ ಆಸ್ತಿ: ಮನ್ನಿಸುತ ಭಕ್ತಿಯಿಂ ತನ್ನ ದೇಶದೊಳು ಮಠ ಮಾನ್ಯಂಗಳಂ ರಚಿಸಿ ಕೊಟ್ಟುದನು ಕಾರಣಂ ಚೆನ್ನೆಸೆಯೆ (ಮಹಾವಿ 18-9).

(2) ಮಠದಲ್ಲಿ ಮಾತ್ರ ಉಳಿದುಕೊಂಡಿರುವ, ಮಠಕ್ಕೆ ಮಾತ್ರ ಸೀಮಿತವಾದ ಸಾರ್ವಜನಿಕವಲ್ಲದ: ಮಠಮಾನ್ಯ ಸಂಕುಚಿತಜ್ಞಾನ ಎಲ್ಲೆಗಳು ಪ್ರಾಚೀನ ಗ್ರೀಕರ ಸಾಹಿತ್ಯದ ಪ್ರಭಾವದಿಂದ ವಿಶಾಲವಾಗಿ ಪಸರಿಸಿದವು (ಪ್ರಬಂಧ 69) (3) ಗವಿಮಠ ವೀರಶೈವ ಮಠವೆಂದು ಕರೆಯುವುದು ಪ್ರಚಾರದಲ್ಲಿದೆ.

ಈ ಉದಾಹರಣೆಗಳಿಂದ ಗವಿಮಠ ಪ್ರಾಚೀನವಾದುದೆಂದು ತಿಳಿಯಬಹುದು.

ಗುರುಃಬ್ರಹ್ಮಾ ಗುರುರ್ವಿಷ್ಣುಃ ಗುರುರ್ದೇವೋ ಮಹೇಶ್ವರಃ ।
ಗುರುಃ ಸಾಕ್ಷಾತ್ ಪರಬ್ರಹ್ಮ ತಸ್ಮೈ ಶ್ರೀಗುರುವೇ ನಮಃ ॥

ಗವಿಮಠವು ಕುಣಿಗಲ್‌ನಿಂದ ಎರಡು ಮೈಲಿ ದೂರದಲ್ಲಿ ನಿಸರ್ಗ ಸೌಂದರ್ಯದಿಂದ ಕೂಡಿ ಪ್ರಾಚೀನ ಕಾಲದಿಂದಲೂ ರಾರಾಜಿಸುತ್ತಿರುವುದು. ರಮಣೀಯವಾದ ಬಿಲ್ವ, ಶ್ರೀಗಂಧ, ದೇವದಾರು, ಹಲಸು, ನೇರಳೆ, ಸಂಪಿಗೆ, ಆಲ, ಮೊದಲಾದ ವೃಕ್ಷಗಳಿಂದಲೂ ಕೂಡಿ ಗವಿಮಠ ಎನ್ನು

---

2. ಪಾಠಶಾಲೆ, 'ಗಿಳಿಗಳೋದುವ ಮಠ ವಿಲ್ಲಳ ನರ್ತನ ನಿಳಯ ಕುಶಾಸಾಂ(4-32)

3. ವಿದ್ಯಾರ್ಥಿಗಳು ಆಗಂತುಕರು ಸಂನ್ಯಾಸಿಗಳು ಇರಲು ನಿರ್ಮಿಸಿರುವ ಕಟ್ಟಡ, ಛತ್ರ, ಮಂದಿರ ' . . . ಳೂ ರಂದೇವಗ್ಗೆ ಕೊಟ್ಟ ಅಪಾರಿ ಸತ್ರವಸಡಸುವಂತಾಗಿ ಲಕ್ಷ್ಮೀನಿಧಿಯೆಂಬ ತನ್ನ ಪೆಸರಲು ಮಠಂ . . . ಮಾಡಿಸಿ (ಎ.ಇ. xxx 9-13-1220)

ವುದಕ್ಕೆ ಅನ್ವರ್ಥವಾಗಿದೆ. ಅನೇಕ ಋಷಿಗಳಿಗೂ, ತಪಸ್ವಿಗಳಿಗೂ, ಸತ್ಪುರಷರಿಗೂ ಶಿವಯೋಗಿಗಳಿಗೂ ಸಿದ್ಧಿಯ ಕೇಂದ್ರವೆಂದು ಶ್ರೀಮಠವು ಲೋಕಪ್ರಸಿದ್ಧಿಯಾಗಿದೆ. ಅಲ್ಲದೇ ವಂಶಪಾರಂಪರ್ಯವಾಗಿ ಶ್ರೀ ಬಾಳೇಹೊನ್ನೂರು ಮಹಾಪೀಠದಶಾಖಾಮಠವಾಗಿರುತ್ತದೆ.

ಈ ಗವಿಮಠದ ಹಿಂದಿನ ಶ್ರೀಗಳವರು ತಮ್ಮ ಅಮೂಲ್ಯ ತಪಸ್ಸಿದ್ಧಿಯನ್ನು ಕನ್ನಡ ನಾಡಿನ ಎಲ್ಲ ವರ್ಗದ ಜನತೆಯ ಉದ್ಧಾರಕ್ಕಾಗಿ ಧಾರೆಎರೆದು ಅವರ ಆತ್ಮೋನ್ನತಿಯನ್ನು ಕಂಡು ಆನಂದಿಸಿದವರು. ಶ್ರೀಗಳವರು ತಮ್ಮ ಆತ್ಮಶಕ್ತಿಯಿಂದ ಬಂದ ಶಿಷ್ಯರ ಪಾಪಗಳನ್ನು ಪರಿಹರಿಸುವುದರಲ್ಲಿ ಸಮರ್ಥರಾಗಿದ್ದರು. ಈ ಕೆಳಕಂಡ ಪಂಚಗವಿ ಮಠಗಳನ್ನು ಮತ್ತು ಮೂಲಮಠವನ್ನು ಸರ್ವತೋಭಿವೃದ್ಧಿಗೆ ತಂದ ಮಹಿಮಾನ್ವಿತರ ಪರಿಚಯವನ್ನು ಶಿಷ್ಯಸಂಹೋಕ್ಕೆ ಮಾಡಿಕೊಡುವುದು ಅತ್ಯಾವಶ್ಯಕ.

1. ಶ್ರೀಗುರು ಗವಿಬಸವೇಶ್ವರ ಸ್ವಾಮಿಗಳು 2. ಶ್ರೀಗುರು ಬಸವಶಿವಾಚಾರ್ಯ ಸ್ವಾಮಿಗಳು 3. ಶ್ರೀ ಸಿದ್ಧವೀರಸ್ವಾಮಿಗಳು. 4. ಶ್ರೀ ಬಾಳೇಶ್ವರ ಸ್ವಾಮಿಗಳು 5. ಶ್ರೀ ಸಿದ್ಧಲಿಂಗಸ್ವಾಮಿಗಳು. 6. ಶ್ರೀಗುರು ದತ್ತಸ್ವಾಮಿಗಳು 7. ಶ್ರೀ ಬಸವಯ್ಯಸ್ವಾಮಿಗಳು.

ಈ ಗುರು ಪುಂಗವರು ಅನೇಕ ಪಟ್ಟಣ, ಗ್ರಾಮ ಮುಂತಾದವುಗಳನ್ನು ಸಂಚಾರಮಾಡಿ ಶಿಷ್ಯರಿಗೆ ಧರ್ಮೋಪದೇಶ ಮಾಡಿ ಅವರ ಆತ್ಮೋನ್ನತಿಯನ್ನು ಕಂಡು ಆನಂದಿಸಿರುತ್ತಾರೆ. ಈ ಮಹಾಮಹಿಮರಾದ ಶ್ರೀಗಳು ಲೋಕಕಲ್ಯಾಣಕ್ಕಾಗಿ ಸಂಚಾರ ಮಾಡುತ್ತಿರುವಾಗ ಶಿಷ್ಯರ ಗ್ರಾಮಗಳಲ್ಲಿಯೇ ಶಿವೈಕ್ಯರಾಗಲು ಗುರು ಭಕ್ತರು ಅಲ್ಲಿಯೇ ಪೀಠ (ಗುದ್ದುಗೆ) ಮಾಡಿ ಭಕ್ತಿಯಿಂದ ಪೂಜಿಸಿಕೊಂಡು ಬರುತ್ತಿರುವುದು ಈಗಲೂ ಕಾಣಬಹುದು ಮೊದಲನೆಯ ಶ್ರೀಗುರು ಗವಿ ಬಸವೇಶ್ವರಸ್ವಾಮಿಗಳ, ಮತ್ತು ಎರಡನೆಯ ಶ್ರೀ ಗುರು ಬಸವ ಶಿವಾಚಾರ್ಯ ಸ್ವಾಮಿಗಳವರ ಗದ್ದುಗೆಗಳು ಕುಣಿಗಲ್ ಗವಿಮಠದಲ್ಲಿ ಇರುತ್ತವೆ. ಈ ಯೋಗಿ ಪುಂಗವರು ಸಿದ್ಧಪುರುಷರಾಗಿದ್ದರು. ಆಯುರ್ವೇದ, ಮತ್ತು ಜ್ಯೋತಿಷ್ಯ, ಧರ್ಮಶಾಸ್ತ್ರಗಳ ಅರಿವಿನಿಂದ, ಅನೇಕ ಅಂಟುರೋಗಗಳನ್ನು, ಭೂತಭಯ ನಿವಾರಣೆ ಮಾಡಿ ಶಿಷ್ಯರ ಬಂಧನ ಬಿಡುಗಡೆ ಮಾಡಿರುತ್ತಾರೆ. ಈ ಕಾರಣಗಳಿಂದ ಈಗಲೂ ಸಹ ಅನೇಕ ಗ್ರಾಮದವರು, ಗ್ರಾಮ

ಗಳಿಗೆ ಅಂಟುರೋಗ ಬಂದಾಗ ಶ್ರೀಗಳ ಗದ್ದುಗೆಗೆ ರುದ್ರಾಭಿಷೇಕ, ಬಿಲ್ವಾರ್ಚನೆಗಳನ್ನು ಬಂದು ಮಾಡಿಸಿ, ಶ್ರೀಗುರುವಿನ ತೀರ್ಥವನ್ನು ತೆಗೆದುಕೊಂಡು ಹೋಗಿ ಮನೆ ಮನೆಗೂ ಪ್ರೋಕ್ಷಣೆ ಮಾಡಿ, ನಿವಾರಣೆಯನ್ನು ಪಡೆಯುತ್ತಿರುತ್ತಾರೆ. ಮೂರನೆಯವರು ಶ್ರೀ ಸಿದ್ಧವೀರ ಸ್ವಾಮಿಗಳು. ಇವರು ಪವಾಡ ಪುರುಷರಾಗಿಯೂ ನಿಗ್ರಹ, ಅನುಗ್ರಹ ಶಕ್ತಿ ಸಂಪನ್ನರಾಗಿಯೂ ಮೆರೆದು ಶಿಷ್ಯರ ಕಲ್ಯಾಣ ಮಾಡಿ ಆದರ ಆತ್ಮ ಜ್ಯೋತಿಯಾಗಿ ಅಮರರಾಗಿರುತ್ತಾರೆ. ಈ ಮಹಾಮಹಿಮರೇ ಪವಾಡಮಾಡಿ ಪಂಚ ಮಠಗಳನ್ನು ಸಂಪಾದಿಸಿದವರು. ಪವಾಡಾ ನಂತರ, ನಾಯಕನ ಪ್ರಾರ್ಥನೆಯಂತೆ ಶ್ರೀಗಳ ನಾಮಧೇಯ ಶ್ರೀಗುರು 'ಫಿರಂಗೀಶ್ವರರು' ಎಂದು ಪ್ರಚಾರವಾಯಿತು. ಇದರ ಪೀಠ(ಗದ್ದುಗೆ) ಕುಣಿಗಲ್ ತಾಲ್ಲೂಕು ಅಂಕನ ಹಳ್ಳಿ ಶ್ರೀಗವಿ ಮಠದಲ್ಲಿ ಇರುತ್ತದೆ. ಈ ವಿಭೂತಿ ಪುರುಷರೇ ಚರಿತ್ರೆಯ ಮೂಲ ಕಾರಣರು. ನಾಲ್ಕನೆಯವರು ಶ್ರೀ ಬಾಳೇಶ್ವರ ಸ್ವಾಮಿಗಳು. ಇವರ ಗದ್ದುಗೆ ಹೊಸೂರು ತಾಲ್ಲೂಕು ಡೆಂಕಣಿ ಕೋಟೆ ಡಿವಿಜನ್ ಉರಿಗ್ಯ ಎಂಬ ಗ್ರಾಮದ ಹತ್ತಿರ ನಂದಿಪುರ ಗ್ರಾಮದಲ್ಲಿರುತ್ತದೆ. ಐದನೆಯವರು ಶ್ರೀ ಸಿದ್ದಲಿಂಗಸ್ವಾಮಿಗಳು. ಈ ಶ್ರೀಗಳವರ ಗದ್ದುಗೆ ಕುಣಿಗಲ್ ತಾಲ್ಲೂಕು ಹಾಲಕೆರೆಯಲ್ಲಿರುತ್ತದೆ. ಇವರು ವಾಕ್‌ಸಿದ್ಧಿ ಪುರುಷರಾಗಿದ್ದರು. ಬಂದ ಶಿಷ್ಯರ ಕಷ್ಟಗಳನ್ನು ಅರಿತು ಅವರ ದುಃಖಗಳನ್ನು ನಿವಾರಣೆ ಮಾಡುತ್ತಿದ್ದರು. ಶ್ರೀಗಳು ಯಾವ ವಿಚಾರವಾಗಿ ನುಡಿದರೆ ಆ ಕಾರ್ಯವು ಆ ನುಡಿಯಂತೆ ನಡೆಯುತಿತ್ತು ಎಂದು ಜನರು ಮುಕ್ತ ಕಂಠದಿಂದ ಹೇಳುತ್ತಾರೆ. ಆರನೆಯವರು ಶ್ರೀ ಗುರುದತ್ತ ಸ್ವಾಮಿಗಳು. ಇವರ ಗದ್ದುಗೆ ಮೂಗಂಡುಗ ಸೀಮೆಯಲ್ಲಿ ಇರುತ್ತದೆ. ಇದು ಕನಕಪುರ ತಾಲ್ಲೂಕಿಗೆ ಸೇರಿರುತ್ತದೆ. ಏಳನೆಯವರು ಶ್ರೀ ಬಸವಯ್ಯ ಸ್ವಾಮಿಗಳು ಇವರು ಅಂಕನ ಹಳ್ಳಿ ಶ್ರೀಗವಿಮಠದ ಸಮೀಪದಲ್ಲಿರುವ ಗಂಗಾಪುರ ಗ್ರಾಮದವರು. ಇವರ ಗದ್ದುಗೆ ಅಂಕನ ಹಳ್ಳಿ ಗವಿಮಠದಲ್ಲಿ ಇರುತ್ತದೆ. ಇವರು ಅಂಕನ ಹಳ್ಳಿ ಗವಿಮಠದ ಅಭಿವೃದ್ಧಿಗೆ ಕಾರಣ ಪುರಷರಾಗಿ ಶ್ರೀಗುರು 'ಫಿರಂಗೀಶ್ವರರ ಮಹಿಮೆಯನ್ನು ಹೆಚ್ಚು ಪ್ರಚಾರ ಮಾಡಿರುವರು. ಈ ಶಿವಯೋಗಿಗಳು ಶ್ರೀಮಠಗಳನ್ನು ಅಭಿವೃದ್ಧಿಗೆ ತಂದು ಧರ್ಮ ಪ್ರಚಾರ ಮಾಡಿರುತ್ತಾರೆ. ಇನ್ನೂ ಆರು ಜನ ಶ್ರೀಗಳ ಕಾಲದೇಶಾದಿಗಳು ದೊರೆಯದಾಗಿದೆ.

ಶ್ರೀ ಶ್ರೀ ಸಿದ್ಧಲಿಂಗ ಶಿವಾಚಾರ್ಯ ಸ್ವಾಮಿಗಳು ಹಾಲಿಮಠಾಧ್ಯಕ್ಷರಾಗಿರುತ್ತಾರೆ. ಶ್ರೀಗಳವರ ಎರಡು ದಶಕಗಳ ಪರಿಶ್ರಮದ ಫಲದಿಂದ ಶ್ರೀ ಮಠವು ಸರ್ವತೋಮುಖವಾಗಿ ಅಭಿವೃದ್ಧಿಯಾಗಿ ಶ್ರೀ ಅಂಕನ ಹಳ್ಳಿ ಗವಿ ಮಠದ ಕೀರ್ತಿಯನ್ನು ಕರ್ನಾಟಕದಾದ್ಯಂತ ಹಬ್ಬಲು ಕಾರಣೀ ಪುರುಷರಾಗಿರುತ್ತಾರೆ (ಈ ಶ್ರೀಗಳ ಕಾರ್ಯಸಾಧನೆಗಳನ್ನು ಮುಂದೆ ವಿವರಿಸಲಾಗಿದೆ.)

ಭಾರತೀಯ ಧಾರ್ಮಿಕ ಸಾಹಿತ್ಯದಲ್ಲಿ ಪವಾಡಕ್ಕೆ ಪ್ರಥಮ ಸ್ಥಾನ. ಚರಿತ್ರೆಗೆ ಗೌಣಸ್ಥಾನ. ಕರ್ನಾಟಕದ ಭಕ್ತಿ ಪರಂಪರೆಯಲ್ಲಿ ಇದಕ್ಕೆ ಅಪವಾದವೇನು ಇಲ್ಲ. ಆಚಾರ್ಯರು, ಶಿವಶರಣರು ನುಡಿದುದನ್ನು ನಡೆದು ತೋರಿಸಿರುವುದು ಸೂರ್ಯ ಪ್ರಕಾಶದಷ್ಟು ಸತ್ಯವಾದರೂ ಅನೇಕ ಸದ್ಗುರುವರ್ಯರುಗಳವರ ಪವಿತ್ರ ಚರಿತ್ರೆಯು ಬೆಳಕು ಕಾಣದಿರುವುದು ಭಾರತೀಯರಾದ ನಮ್ಮಗಳದು ದುರ್ದೈವ. ಇದಕ್ಕೆ ಕುಣಿಗಲ್ ಗವೀಮಠದ ತಪೋಪುಂಗವರಾದ ಶ್ರೀ 'ಘಿರಂಗೀಶ್ವರ, ಸಿದ್ಧವೀರ ಸ್ವಾಮಿಗಳ ಚರಿತ್ರೆ ಒಂದು ನಿದರ್ಶನ. ಆದರೂ ಜನ ಶೃತಿಯಿಂದ ದೊರೆತ ಸಾಧನ ಸಾಮಗ್ರಿಗಳ ಮತ್ತು ಕೆಲವು ಆಧಾರಗಳ ಸತ್ಯಾಂಶವೇ ಶ್ರೀ ಗುರು ಘಿರಂಗೀಶ್ವರರ ಚರಿತ್ರೆಯಾಗಿದೆ.

ಶ್ರಿಗಳವರ ಅನೇಕ ಪವಾಡಗಳು ಜನ ಸಾಮಾನ್ಯರಲ್ಲಿ ಪ್ರಚಾರದಲ್ಲಿವೆ. ಅವುಗಳಲ್ಲಿ ಕೆಲವನ್ನು ಮಾತ್ರ ಈ ಚರಿತ್ರೆಯಲ್ಲಿ ಉದಾಹರಿಸಲಾಗಿದೆ. ಗವೀ ಮಠದ ಮಹಾಮಹಿಮರಾದ ಶ್ರೀಗುರು ಘಿರಂಗೀಶ್ವರರ ಪ್ರತಿಭೆ ಮತ್ತು ಅವರ ಲೋಕ ಕಲ್ಯಾಣ ಕಾರ್ಯಗಳು ಇಂದಿಗೂ ತುಮಕೂರು ಜಿಲ್ಲೆಯ ಕುಣಿಗಲ್ ತಾಲ್ಲೂಕಿನಲ್ಲಿ ಮನೆಮಾತಾಗಿದೆ. ಆದರೆ ಅವರ ಕಾಲದೇಶಾದಿಗಳ ಬಗ್ಗೆ ಸಾಕಷ್ಟು ಆಧಾರಗಳು ದೊರೆಯದಾಗಿದೆ. ಸಾಮಾನ್ಯವಾಗಿ ವೀರಶೈವ ಮಠಾಧೀಶ್ವರರ, ಶಿವಶರಣರ ತಂದೆತಾಯಿಗಳ ಹೆಸರು ಕಾಲ ದೊರೆಯುವುದು ದುರ್ಲಭವಾಗಿದೆ. ಈ ಮಠಾಧೀಶ್ವರರ ಜೀವನ ಆರಂಭವಾಗುವುದು, ಅವರು ಆಶ್ರಮ ಸ್ವೀಕಾರವಾದ ಮೇಲೆ, ಎಂದರೆ ಪೂರ್ವಾಶ್ರಮ ನಿರಸನವಾದ ನಂತರ. ಆದಕಾರಣ ಮಠಾಧೀಶ್ವರರು ತಮ್ಮ ಜೀವನವನ್ನು ಹೇಳುವ ಪ್ರಸಂಗ ಬಂದಲ್ಲಿ ಅಥವಾ ಬೇರೆಯವರು ಅವರ ಚರಿತ್ರೆಯನ್ನು ವಿವರಿಸುವದಿದ್ದಲ್ಲಿ ಅವರ ಪೂರ್ವಾಶ್ರಮಕ್ಕೆ ಸಂಬಂಧ ಪಟ್ಟ ವಿಷಯಗಳನ್ನು ಹೇಳುವುದಿಲ್ಲ. ಅವರು ಹೆತ್ತ ತಂದೆ ತಾಯಿಗಳು ಪೂರ್ವಾಶ್ರಮಕ್ಕೆ ಸಂಬಂಧ ಪಟ್ಟವರಾದುದರಿಂದ

ಅವರ ಹೆಸರುಗಳನ್ನು ತಿಳಿಸುವ ಚರಿತ್ರೆಗಳು ವಿರಳವಾಗಿದೆ. ಅವರ ಗುರು ಪರಂಪರೆ ಮಾತ್ರ ದೊರೆಯುತ್ತದೆ. ಷಡಕ್ಷರ ದೇವರು ಮುಂತಾದ ಮಹಿಮರು ತಮ್ಮ ಕಾವ್ಯಗಳ ಆರಂಭದಲ್ಲಿ ತಮ್ಮ ಗುರು ಪರಂಪರೆಯನ್ನು ವಿಶದವಾಗಿ ವರ್ಣಿಸಿರುವರಲ್ಲದೆ ತಂದೆ ತಾಯಿಗಳ ಮಾತನ್ನು ಅವರು ಎತ್ತುವುದೇ ಇಲ್ಲ. ಈ ಪರಂಪರೆಯಲ್ಲಿ ಬಂದದ್ದರಿಂದ ಶ್ರೀಗುರು ಫಿರಂಗೀಶ್ವರರ ಕಾಲವನ್ನು ಗುರುತಿಸುವುದು ಕಷ್ಟವಾಗಿದೆ. ಅದರೂ ಕೆಲವು ವಿದ್ವಾಂಸರು ಇವರ ಕಾಲ ೧೭ನೇ ಶತಮಾನವಿರಬಹುದೆಂದು ಅಭಿಪ್ರಾಯ ಪಟ್ಟಿರುತ್ತಾರೆ.

ಕುಣಿಗಲ್‌ಸಮೀಪದ ಮೂಲ ಗವಿಮಠದಲ್ಲಿ ಶ್ರೀ ಸಿದ್ಧವೀರಸ್ವಾಮಿಗಳು* ಒಮ್ಮೆ ಅನುಷ್ಠಾನ ಮಾಡುತ್ತಿರುವಾಗ ಮೈಸೂರು ನಾಡ ಪ್ರಭುಗಳಾದ ಶ್ರೀ ದೊಡ್ಡ ದೇವರಾಜ ಒಡೆಯರ್‌ರವರ [ಕ್ರಿ. ಪೂ. ೧೬೫೯ ರಿಂದ ಕ್ರಿ. ಪೂ. ೧೬೭೩[1]] ಆಳ್ವಿಕೆಯಲ್ಲಿ ಮಾಗಡಿ ಕೆಂಪೇಗೌಡನ ಅಧೀನದಲ್ಲಿದ್ದ ಹುಲಿಯೂರ್ ದುರ್ಗ ಮತ್ತು ಕುಣಿಗಲ್ಲನ್ನು ಶ್ರೀ ಪ್ಲವಂಗ ನಾಮಸಂವತ್ಸರದ ಮಾರ್ಗಶಿರ ಬಹುಳ 30 ರಲ್ಲಿ ಹುಲಿಯೂರ್ ದುರ್ಗವನ್ನೂ ಇದೇ ಶುದ್ಧ 10 ರಲ್ಲಿ ಕುಣಿಗಲ್ಲನ್ನೂ ತನ್ನ ಅಧೀನ ಪಡಿಸಿಕೊಂಡು ವಿಸ್ತರಿಸುವ ಸಮಯದಲ್ಲಿ ತನ್ನ ಸೈನ್ಯ ಸಮೇತ ರಮಣೀಯವಾದ ಗಿಡ ಮರಗಳಿಂದ ಕೂಡಿದ ಗವೀ ಮಠದ ಪುಣ್ಯ ಭೂಮಿಯಲ್ಲಿ ಬಿಡಾರ ಮಾಡಿರಲು ಗವಿಯನ್ನೂ, ಗವಿಯ ಮೇಲೆ ಎತ್ತರವಾಗಿ ಶಿಖರಾಕಾರದ ಪೌಳಿಯನ್ನು ನೋಡಿ ಇಲ್ಲಿ ಯಾರೋ ಶತೃಗಳು ಗುಪ್ತವಾಗಿ ಅಡಗಿಕೊಂಡಿರುವರೆಂದು ಭಾವಿಸಿ, ಮಠದ ಪೌಳಿಗೆ ಮೂರು ಸಲ 'ಫಿರಂಗಿ' ಗಳಿಂದ ಹೊಡೆಸಲು ಆ ಫಿರಂಗಿಗಳು ಪುಷ್ಪವಾಗಿ ಕೆಳಗೆ ಬೀಳಲು ಪ್ರಭುಗಳಿಗೆ ಪರಮಾಶ್ಚರ್ಯವಾಗಿ ಕೂಡಲೆ ಸ್ಥಳಕ್ಕೆ ಹೋಗಿ ನೋಡಲು ಫಿರಂಗಿಗಳ ಪ್ರಯೋಗದಿಂದ ಪ್ರಾಕಾರದ (ಪೌಳಿ) ಗೋಡೆ ಸ್ವಲ್ಪವೂ ಅಳ್ಳಾಡದೆ ಇರುವುದರಿಂದ ಸ್ಥಳದ ಮಹಿಮೆಯನ್ನು ತಿಳಿಯಲು ಮಠದ ಸುತ್ತ ಪ್ರದಕ್ಷಿಣಾಕಾರವಾಗಿ ಬಂದು ಗವಿ ಬಾಗಿಲಲ್ಲಿ ನಿಂತರು.

ಗವಿಯೊಳಗಡೆ ಪ್ರಣವನಾದ. ಮಧುರವಾದ ಘಂಟಾನಾದ ಗವಿಯಲ್ಲೆಲ್ಲಾ ವ್ಯಾಪಿಸಿದೆ. ಶಂಖ ಜಾಗಟೆಯಾದಿ ವಾದ್ಯಗಳ ನವನಾದಗಳು

* ಶ್ರೀ ಗುರು ಫಿರಂಗೀಶ್ವರರು.

1 ಶ್ರೀಮನ್ಮಹಾರಾಜರ ವಂಶಾವಳಿ 27ನೇ ಅಧ್ಯಾಯ

ಗವಿಯನ್ನು ಭೇಧಿಸಿಕೊಂಡು ಹೊರಬರುತ್ತಿವೆ. ಪೂಜೆಯ ಪರಿಮಳಗಳಿಂದ ಅಲಂಕೃತವಾದ ಶಿವಯೋಗಿಗಳ ಕಾಂತಿ ಸೂರ್ಯ ಕಿರಣವನ್ನು ಮೀರುವಂತೆ ಹೊಳೆಯುತ್ತಿದೆ. ನಂದಾದೀಪಗಳು ಅಕ್ಕಪಕ್ಕಗಳಲ್ಲಿ ಬೆಳಗುತ್ತಿವೆ. ಒಂದು ಕಡೆ ಪಂಚಾರತಿ ಮೊದಲಾದವುಗಳು ಶಾಂತವಾಗಿ ಜ್ವಲಿಸುತ್ತಿವೆ. ಆಗತಾನೆ ಬೆಳಗಿಟ್ಟ ಕರ್ಪೂರದಾರತಿಯ ಹೊಂಬೆಳಕು ಶಿವಕೃಪೆಯಂತೆ ಹೊರಹೊಮ್ಮಿ ಶಿವಯೋಗಿಗಳ ಮುಖಕಾಂತಿಯಲ್ಲಿ ಲೀನವಾಗುತ್ತಿದೆ. ಭಕ್ತಿಯ ಭಾವ ಮೈದುಂಬಿ ಶಿವಯೋಗಿಗಳು ಹಸ್ತದಲ್ಲಿರುವ ಶಿವಲಿಂಗವನ್ನೇ ಎವೆಯಿಕ್ಕದೆ ನೋಡುತ್ತಿದ್ದಾರೆ. ನೋಡಿದವರಿಗೆ ಶಿವಯೋಗಿಗಳು ಶಿವಲಿಂಗಾಂತರ್ಯಾಮಿ ಯಾದ ಶಿವನೊಡನೆ ಸಮರಸರವಾಗಿರುವಂತೆ ಕಾಣುತ್ತಿದ್ದಾರೆ. ಅನಿರೀಕ್ಷಿತ ವಾಗಿ ಯಾವುದೋ ಒಂದು ಧ್ವನಿ ಗವಿಯ ಹೊರಗಡೆಯಾಗಿ ಒಂದು ಮೂರ್ತಿ ಬಂದು ಗಂಭೀರವಾಗಿ ಕೈಜೋಡಿಸಿ ಮುಂದೆ ನಿಂತಂತಾಗಲು ಶಿವಯೋಗಿಗಳು ಮತ್ತೊಮ್ಮೆ ಶಿವಲಿಂಗಕ್ಕೆ ಮಣಿದು ಪೂಜೆಯನ್ನು ಮುಗಿಸಿ ಹೊರಬಂದು ಗವಿಯ ಬಾಗಿಲಲ್ಲೇ ಕೈಜೋಡಿಸಿ ನಿಂತಿದ್ದ ರಾಜನ ಮೇಲೆ ತಮ್ಮ ಜ್ಞಾನ ದೃಷ್ಟಿಯನ್ನು ಹಾಯಿಸಲು ಅವನಾದರೋ, ಜಟಾಮುಕುಟ ಮಂಡಿತರು, ಭಸ್ಮಲಿಪ್ತ ಶರೀರವುಳ್ಳವರು, ಕೊರಳಲ್ಲಿ ರುದ್ರಾಕ್ಷಾಲಂಕೃತರು, ಮಸ್ತಕದಲ್ಲಿ ತ್ರಿಪುಂಡ್ರಾಂಕಿತರು, ಕಂಠದಲ್ಲಿ ಶಿವಲಿಂಗಧಾರಣಯುತರು, ಶಿವಾದ್ವೈತ ಸಿದ್ಧಾಂತದ ಜ್ಞಾನದಿಂದುಂಟಾದ ಪರಮಾನಂದದಲ್ಲಿ ಲೀನರಾದವರು, ಶಿವ, ಕುಲ ಸಮುದಾಯಕ್ಕೆ ರತ್ನಪ್ರಾಯರು, ದರ್ಶನ ಮಾತ್ರದಿಂದಲೇ ಸಮಸ್ತ ಪ್ರಾಣಿಗಳ ಪಾಪವನ್ನು ನಾಶಮಾಡತಕ್ಕವರು ಆದ ಶಿವಸ್ವರೂಪರಾದ ಶ್ರೀ ಗುರುವನ್ನು ನೋಡಿ ಆಶ್ಚರ್ಯಗೊಂಡ ರಾಜನಿಗೆ ಜ್ಞಾನೋದಯವಾಗಿ ಗುರುಗಳ ಪಾದಾರವಿಂದಗಳಿಗೆ ಭಕ್ತಿಯಿಂದ ನಮಸ್ಕರಿಸಿ ಅರಿಕೆಮಾಡಿದನು.

ಪೂಜ್ಯಮಹಾತ್ಮರೆ, ನಾವುಗಳು ತಿಳಿಯದೆ ಬಲವಾದ ಫಿರಂಗಿಗಳಿಂದ ತಮ್ಮ ಗವಿಮಠದ ಪೌಳಿಗೆ ಹೊಡೆಸಿದೆವು. ಆ ಫಿರಂಗಿಗಳು ಗೋಡೆಯನ್ನು ಭೇದಿಸುವ ಬದಲಾಗಿ ಪುಷ್ಪಗಳಾಗಿ ಬಿದ್ದಿರುವುದರಿಂದ ನನಗೆ ಪರಮಾಶ್ಚ ರ್ಯದ ಜೊತೆಗೆ ಭಕ್ತಿಯು ಮೂಡಿದೆ. ಇದೆಲ್ಲ ತಮ್ಮ ಮಹಿಮೆ ಎಂದು ನಾನು ತಿಳಿಯುತ್ತೇನೆ. ನಾವುಗಳು ತಿಳಿಯದೆ ಎಸಗಿದ ಅಪರಾಧವನ್ನು

ಕರುಣಾಮೂರ್ತಿಗಳಾದ, ಶ್ರೀಗುರುಗಳಾದ ತಾವು ಕ್ಷಮಿಸಬೇಕೆಂದು ಪ್ರಾರ್ಥಿಸುತ್ತೇನೆ ಎಂದು ನುಡಿದನು.

ಶಿವಯೋಗಿಗಳು ನಸುನಕ್ಕು ಎಲೈ! ಗುರುಭಕ್ತನಿಷ್ಟನಾದ ರಾಜನೆ ನಿನ್ನ ಪ್ರಾರ್ಥನೆಯಂತೆ ನಿನ್ನ ಅಪರಾಧವನ್ನು ನಾವುಗಳು ಕ್ಷಮಿಸಿರುತ್ತೇವೆ. ಗುರುವನ್ನು ಸಾಮಾನ್ಯ ಮಾನವರೆಂದು ತಿಳಿಯಬೇಡ. "ಯಸ್ಯದೇವೇ ಪರಾಭಕ್ತಿಃ ಯಥಾದೇವೇ ತಥಾಗುರೌ" [2] ದೇವರಲ್ಲಿ ಯಾವ ಭಕ್ತಿಯನ್ನು ಇಟ್ಟಿರುತ್ತೇವೆಯೋ ಅದೇ ಭಕ್ತಿಯನ್ನು ಗುರುವಿನಲ್ಲಿಯೂ ಇರಿಸಬೇಕು. ಗುರುವು ಸರ್ವಶಕ್ತನೂ ಆಗಿರುತ್ತಾನೆ ಈ ಬಗ್ಗೆ ;

ಸಏವವಂದ್ಯಃ ಪರಿಪೂಜನೀಯಃ [3]
ಸಏವ ಮಾತಾಜಗತಾಂ ಪಿತಾಚ ।
ಸಏವ ಬಂಧುಸ್ಸಗುರುಶ್ಶಿವಸ್ಸ್ಯಾತ್
ಜ್ಞಾನಾಮೃತಂ ಯಃ ಪರಮಂ ಪ್ರದದ್ಯಾತ್ ॥

ಜಗತ್ತಿನಲ್ಲಿ ಗುರುವೇ ತಂದೆಯು, ಗುರುವೇ ತಾಯಿಯು, ಗುರುವೇ ಬಂಧುವು, ಜ್ಞಾನಾಮೃತವನ್ನು ಪಾನಮಾಡಿಸುವವನು. ಸರ್ವವಂದ್ಯನೂ, ಪೂಜಿಸಲ್ಪಡತಕ್ಕವನೂ ಆಗಿರುತ್ತಾನೆ. ಈ ಸ್ಥಳವು ತಪೋಧನರ ಆಧ್ಯಾತ್ಮಿಕ ಕೇಂದ್ರವಾಗಿರುವುದರಿಂದ ಇನ್ನೊಮ್ಮೆ ಈ ಮಾರ್ಗವಾಗಿ ಬಂದು ಶಬ್ದಮಾಡಿ ಮಹಾತ್ಮರ ತಪಸ್ಸಿಗೆ ವಿಘ್ನ ಮಾಡಬೇಡ. ಅದರಿಂದ ನಿನಗೆ ಕೇಡಾಗುವುದು ಎಂದು ನುಡಿದರು.

ಭಯಗ್ರಸ್ತನಾದ ರಾಜನು ಪರಮತಪೋನಿಧಿಗಳಾದ ತಮಗೆ ನಾನು ಮತ್ತು ನನ್ನ ಪರಿವಾರವೆಲ್ಲವೂ ಇಂದಿನಿಂದ ಶಿಷ್ಯರಾಗಿ ನಡೆದುಕೊಳ್ಳುತ್ತೇವೆ. 'ದಿಕ್‌ಕ್ಷತ್ರಿಯ ಬಲಂ ಬ್ರಹ್ಮತೇಜೋ ಬಲಂ ಬಲಂ' ಎಂಬ ಉಕ್ತಿಯು ಋಷಿಗಳ ಬ್ರಹ್ಮತೇಜೋಬಲದ ಮುಂದೆ ಕ್ಷತ್ರಿಯ ಬಲವು ಅಲ್ಪವೆಂದು ಸಾರುತ್ತಿರುವುದರಿಂದ ನಾನು ತಮ್ಮ ಪ್ರಭಾವವನ್ನು ಕಣ್ಣಾರೆ ಕಂಡು ಆನಂದಯುಕ್ತ

---

2. ಶ್ವೇತಾಶ್ವತರೋಪನಿಷತ್.
3. ಶಿವಧರ್ಮೋತ್ತರ ಮತ್ತು ವೀರಶೈವಾನಂದ ಚಂದ್ರಿಕೆ ಕನ್ನಡ ಪು. 177

ನಾಗಿರುವೆ. ತಮ್ಮ ದರ್ಶನದಿಂದ ನನ್ನ ಜನ್ಮ ಪುನೀತವಾಯಿತು. ಆದುದರಿಂದ ತಮ್ಮ ದರ್ಶನಕ್ಕೆ ಪ್ರತಿನಿತ್ಯ ಬರುವ ಶಿಷ್ಯರ ಪ್ರಸಾದಕ್ಕಾಗಿ (1) ಎಲಗಲಹಳ್ಳಿ ಶ್ರೀ ಗವಿಮಠ (2) ತಾವರೆಕೆರೆ ಶ್ರೀ ಗವಿಮಠ (3) ಹೊಲಿಕಟ್ಟೆ ಶ್ರೀ ಗವಿಮಠ (4) ವಿರುಪಸಂದ್ರದ ಶ್ರೀ ಗವಿಮಠ (5) ಅಂಕನಹಳ್ಳಿ ಶ್ರೀ ಗವಿಮಠ ಈ ಐದು ಮಠಗಳನ್ನು ಮತ್ತು ಪ್ರತಿ ಮಠದ 60 ಎಕರೆ ಭೂಮಿಯನ್ನು ಸೂರ್ಯಚಂದ್ರ, ನದಿಗಳೂ ಇರುವರೆಗೆ ತಾವು ತಮ್ಮ ಶಿಷ್ಯಪರಂಪರೆ ಅನುಭವಿಸಿಕೊಂಡು ಹೋಗಬಹುದೆಂದು ಒಂದು ಶಾಸನವನ್ನು ಬರೆದು (ಜಹಗೀರಿ ಹಾಕಿಕೊಟ್ಟು) ಶ್ರೀಗಳವರಿಗೆ ಒಪ್ಪಿಸಿದನು.* ತರುವಾಯ ರಾಜನು ಪೂಜ್ಯ ಶ್ರೀಗಳನ್ನು ನಮ್ಮ ಸೈನ್ಯವು ತಮ್ಮ ಗವೀಮಠದ ಮೇಲೆ ಪ್ರಯೋಗಿಸಿದ 'ಫಿರಂಗಿ'ಗಳು ಪುಷ್ಪವಾಗಿಬಿದ್ದುದರಿಂದ ಇನ್ನು ಮುಂದೆ ತಮ್ಮ ನಾಮಧೇಯ 'ಫಿರಂಗೀಶ್ವರ'ರೆಂದು ಈ ನಾಡಿನಲ್ಲಿ ಪ್ರಸಿದ್ಧಿಯಾಗಲಿ ಎಂದು ಶ್ರೀ ಗುರು ಸನ್ನಿಧಿಯಲ್ಲಿ ವಿಜ್ಞಾಪಿಸಿಕೊಂಡನು.

ಶ್ರೀಗುರುವು ಸಮ್ಮತಿಸಿ, ಶಿಷ್ಯರ ಮನೋಭಿಲಾಷೆಯನ್ನು ನೆರವೇರಿಸುವುದು ಶ್ರೀಗುರು ಹೊಣೆಯಾದ್ದರಿಂದ ಎಲೈರಾಜನೆ, 'ಸದ್ಧರ್ಮದಿಂದ ರಾಜ್ಯವಾಳು, ಬುದ್ಧಿವಂತರ ಕೂಡಿ ಸ್ಥಿರವಾಗಿ ಯಿರ್ಪುದು ಯೋಗ್ಯಂ' ಎಂದು ಅಪ್ಪಣೆ ಕೊಡಿಸಿ ಆಶೀರ್ವದಿಸಿದರು. ರಾಜನು ಆಶೀರ್ವಾದ

---

4. ಶ್ರೀಗಳವರ ತಪಶ್ಯಕ್ತಿಯನ್ನೂ, ಶ್ರೀ ಗವಿಮಠದ ಮೇಲೆ ಫಿರಂಗಿ ಪ್ರಯೋಗಿಸಿದಾಗ ಅವುಗಳು ಪುಷ್ಪವಾದುದನ್ನು ಕಣ್ಣಾರೆ ಕಂಡು ಆಶ್ಚರ್ಯಗೊಂಡ ಅರಸರು, ಭಕ್ತಿಯಿಂದ ಪೂಜ್ಯ ಶ್ರೀಗಳವರನ್ನು ಮೈಸೂರು ಅರಮನೆಗೆ ಕರೆದುಕೊಂಡು ಹೋಗಿ ಪೂಜಿಸಿ ಐದು ಗವಿಮಠಗಳನ್ನು ಅವುಗಳ ಆಸ್ತಿಯನ್ನು ತಾವು ಮತ್ತು ತಮ್ಮ ಶಿಷ್ಯ ಪರಂಪರೆ ಅನುಭವಿಸಿಕೊಂಡು ಹೋಗಬಹುದೆಂದು ಒಂದು ತಾಮ್ರ ಶಾಸನ ಬರೆದು ಶಿವಯೋಗಿಗಳಿಗೆ ಅರ್ಪಿಸಿ, ರಾಜಮರ್ಯಾದೆಗಳೊಡನೆ ಮಠಕ್ಕೆ ಕಳುಹಿಸಿಕೊಟ್ಟರು. ಈ ತಾಮ್ರಶಾಸನ ಮಠದಲ್ಲಿ ಬಹುಕಾಲವಿದ್ದು ಶ್ರೀಗುರು ದತ್ತು ಸ್ವಾಮಿಗಳು ಸದಾಪ್ರವಾಸದಲ್ಲಿ ಇರುತ್ತಿದ್ದರಿಂದ ಭದ್ರತೆಗಾಗಿ ಚಕ್ರಭಾವಿ ಬೃಹನ್ಮಠಕ್ಕೆ ಕೊಡಲು, ಆ ಮಠದ ಶ್ರೀಗಳು ದುರುದ್ದೇಶದಿಂದ ಹಾಳುಮಾಡಿದರೆಂದು ಶಿಷ್ಯರು ಹೇಳುತ್ತಾರೆ. ಚಕ್ರಭಾವೀ ಮಠದ ಕೈ ಚಂದ್ರಶೇಖರಯ್ಯ ಮೇಲ್ಕಂಡ ಶಾಸನದ ವಿಷಯು ಸತ್ಯವೆಂದು ಒಪ್ಪಿದ್ದರು.

* ಹಿರೇಕಲ್ ಬೆಟ್ಟದ ಶ್ರೀ ಚನ್ನಬಸವ ಶಿವಯೋಗಿಗಳ ಚರಿತ್ರೆ ಪು. 57,

ಪಡೆದು ಸಂತೋಷದಿಂದ ತನ್ನ ಸೈನ್ಯ ಸಮೇತ ಮುಂದೆ ಪ್ರಯಾಣ ಮಾಡಿದನು. ರಾಜನು ಶ್ರೀಗಳವರ ಆಶೀರ್ವಾದ ಬಲದಿಂದ ಮುಂದೆ ಆ ನಾಡನ್ನು ಬಹುಕಾಲ ಆಳಿದನು. ಮುಂದೆ ಶ್ರೀಗಳ ನಾಮಧೇಯ 'ಶ್ರೀ ಫಿರಂಗೀಶ್ವರ' 'ಶ್ರೀಗುರು ಫಿರಂಗಿಸ್ವಾಮಿ' ಎಂದು ಪ್ರಚಾರವಾಯಿತು, ಎಂದು ಶ್ರೀಮಠದ ಶಿಷ್ಯರು ಹೇಳುವುದು ಅಕ್ಷರಶಃ ನಿಜವೆಂದು ತಿಳಿಯಬೇಕು. ತುಮಕೂರು, ಬೆಂಗಳೂರು, ಮಂಡ್ಯ ಜಿಲ್ಲೆಗಳಲ್ಲಿ ಶ್ರೀಗುರು ಫಿರಂಗೀಶ್ವರ, ಶ್ರೀಗುರು ಫಿರಂಗಿಸ್ವಾಮಿಗಳು, ಫಿರಂಗಿ ಗವಿಮಠ ಪ್ರಸಿದ್ಧಿಯಾಗಿರುತ್ತದೆ. ಅವರ ಮೂಲ ನಾಮಧೇಯ, ಗವಿಮಠ ಎಂದು ಪ್ರಚಾರ ಕಡಿಮೆ.

ಜನತೆಯಲ್ಲಿ ಮೂಡಿರುವ ಅಜ್ಞಾನವನ್ನು ಹೋಗಲಾಡಿಸಿ ಅವರಲ್ಲಿ ಗೋಪ್ಯವಾಗಿಹುದುಗಿರುವ ಶಿವಜ್ಞಾನವನ್ನು ಪ್ರಕಾಶನಕ್ಕೆ ತಂದು ಅವರನು ಮುಕ್ತರನ್ನಾಗಿ ಮಾಡುವ ಹೊಣೆ ನಮ್ಮ ಪ್ರಾಚೀನ ಭರತಖಂಡದ ಮಠಾಧೀಶ್ವರರ ಕರ್ತವ್ಯವಾಗಿತ್ತು. ಆದ್ದರಿಂದ ಶ್ರೀ ರೇಣುಕಾದ್ಯಾಚಾರ್ಯರೂ, ಶಿವಶರಣರೂ ರಾಷ್ಟ್ರಾದ್ಯಂತ ಪ್ರವಾಸಮಾಡಿ ಧರ್ಮಪ್ರಚಾರ ಮಾಡಿರುವ ವಿಷಯ ಅನೇಕ ಧರ್ಮಗ್ರಂಥಗಳಲ್ಲಿ ಉಕ್ತವಾಗಿದೆ. ಈ ಪೂಜ್ಯಪಾದರು ಧರ್ಮಪ್ರಚಾರಕ್ಕಾಗಿ ಪ್ರವಾಸ ಮಾಡುವಾಗ ಅನೇಕ ಸ್ಥಳಗಳಲ್ಲಿ ಅನುಷ್ಠಾನ ಮಾಡಿ ಆ ಕ್ಷೇತ್ರಗಳನ್ನು ಜಾಗ್ರ ಸ್ಥಾನವನ್ನಾಗಿಮಾಡಿರುವುದು ಲೋಕ ಪ್ರಸಿದ್ಧವಾಗಿದೆ. ಇಂಥ ಪವಿತ್ರ ಸ್ಥಳಗಳಲ್ಲಿ ಬೆಂಗಳೂರು ಜಿಲ್ಲೆ, ರಾಮನಗರಂ ತಾಲ್ಲೂಕು, ಶ್ರೀ ರೇವಣಸಿದ್ಧೇಶ್ವರರ ತಪೋಭೂಮಿಯಾದ ಶ್ರೀ ರೇವಣಸಿದ್ಧೇಶ್ವರ ಬೆಟ್ಟವು ಒಂದಾಗಿದೆ. ಜಗದ್ಗುರು (ಶ್ರೀ ರೇವಣಸಿದ್ಧೇಶ್ವರರು) ಲೋಕ ಕಲ್ಯಾಣಾರ್ಥವಾಗಿ ಸಂಚಾರ ಮಾಡುತ್ತಿರುವಾಗ ಈ ಸ್ಥಳದಲ್ಲಿ ಕೆಲವು ಕಾಲ ಅನುಷ್ಠಾನ ಮಾಡಿದ್ದರಿಂದ ಶ್ರೀ ರೇವಣಸಿದ್ಧೇಶ್ವರ ಬೆಟ್ಟವೆಂದು ಅಂದಿನಿಂದ ಇಂದಿನವರೆಗೆ ಕಂಗೊಳಿಸುತ್ತಿದೆ. ಈ ಆಚಾರ್ಯರ ತಪೊಶ್ಶಕ್ತಿಯಿಂದ ಚೇತನಗೊಂಡ ಮಹಿಮಾಕ್ಷೇತ್ರ ಭಕ್ತರ ಕೋರಿಕೆಗಳನ್ನು ಈಡೇರಿಸಿ ಮಹಿಮಾಸ್ಥಳವೆಂದು ಕರ್ನಾಟಕದಲ್ಲೂ ಕೀರ್ತಿ ಪಡೆದಿದೆ.

ಕ್ಷೇತ್ರಮಹಿಮೆಯನ್ನು ತಿಳಿದು ಅನೇಕ ಯೋಗೀಶ್ವರರು, ಸಂಸ್ಥಾನಾಧೀಶ್ವರರು, ಪೀಠಾಧೀಶ್ವರರು, ಮಠಾಧಿಪತಿಗಳು ವಿರಾಗಿಗಳೂ ಇಲ್ಲಿಗೆ ಬಂದು ತಪವನ್ನಾಚರಿಸಿ ಶಿವಸ್ವರೂಪಿಗಳಾದ ಶ್ರೀಗುರುರೇವಣ ಸಿದ್ಧೇಶ್ವರರ

ಪರಮಾನುಗ್ರಹದಿಂದ ಸಿದ್ಧಿಯನ್ನು ಪಡೆದು ಆತ್ಮಾನಂದವನ್ನು ಅನುಭವಿಸಿ ತಮ್ಮ ಸ್ವಕ್ಷೇತ್ರಗಳಿಗೆ ಹೋಗಿ ಆಧ್ಯಾತ್ಮಜ್ಞಾನವನ್ನು ಪ್ರಚಾರಪಡಿಸಿರುತ್ತಾರೆ. ಈ ವಿಷಯವನ್ನು ಅನೇಕ ಮಹಿಮಾಪುರುಷರಿಂದ ತಿಳಿದ ಶ್ರೀಗುರು ಫಿರಂಗೀಶ್ವರರು ಶ್ರೀ ರೇವಣಸಿದ್ಧೇಶ್ವರ ಬೆಟ್ಟದಲ್ಲಿ ಅನುಷ್ಠಾನಮಾಡಿ ಅವರ ಕೃಪೆಯನ್ನು ಪಡೆಯುವ ಅಭಿಲಾಷೆಯಾಯಿತು. ಶ್ರೀಗಳ ಪವಿತ್ರ ಕಾಯಕವಾದರೋ! ಪುಣ್ಯಸ್ಥಳಗಳಲ್ಲಿ ಆರು ತಿಂಗಳು ಅನುಷ್ಠಾನ ಮಾಡುವುದು ಬಂದ ತಪಶ್ಶಕ್ತಿಯಿಂದ ಆರುತಿಂಗಳು ಲೋಕಸಂಚಾರ ಮಾಡಿ ಶಿಷ್ಯರನ್ನು ಉದ್ಧಾರ ಮಾಡುವುದೇ ಅವರ ಪರಮ ಗುರಿಯಾಗಿತ್ತು.

ಎಂದಿನಂತೆ ಶ್ರಾವಣ ಮಾಸ ಬರಲು ಶ್ರಾವಣಮಾಸದ ಅನುಷ್ಠಾನವನ್ನು ಶ್ರೀ ರೇವಣಸಿದ್ಧೇಶ್ವರರ ತಪೋಭೂಮಿಯಲ್ಲಿ ಪ್ರಾರಂಭಿಸಿದರು. ಶ್ರೀಗಳ ಅನುಷ್ಠಾನದ ಪ್ರತಿಭೆ ಶುಕ್ಲಪಕ್ಷದ ಚಂದ್ರನಂತೆ ದಿನೇದಿನೇ ಅಭಿವೃದ್ಧಿಗೊಂಡು ಪೂರ್ಣಚಂದ್ರನ ಕಿರಣಗಳ ಪ್ರಕಾಶದಂತೆ ರಾಮನಗರಂ, ಕನಕಪುರ, ಕುಣಿಗಲ್ ಚನ್ನಪಟ್ಟಣ ತಾಲ್ಲೋಕುಗಳ ಜನತೆಯ ಹೃದಯ ಮಂದಿರಗಳಲ್ಲಿ ವ್ಯಾಪಿಸಿತು.

ಶ್ರೀಮಠದ ಭಕ್ತರೂ ಶ್ರೀಗಳ ಅನುಷ್ಠಾನದ ವಿಷಯ ತಿಳಿದು ನೂರಾರು ಜನರು ಫಲಪುಷ್ಪಗಳ ಸಹಿತ ಬಂದು ಸೇವೆ ಸಲ್ಲಿಸಿ, ಗುರೂಪದೇಶ ವಾಕ್ಯಾಮೃತಾಸ್ವಾದದಿಂದ ಶಿವಜ್ಞಾನಫಲವನ್ನು ಸಂಪಾದಿಸಿಕೊಂಡು ತಮ್ಮ ಗ್ರಾಮಗಳಿಗೆ ಹೋಗಿ ಶ್ರೀಗಳ ಮಹಿಮೆಯನ್ನು ಪ್ರಚಾರಪಡಿಸಿದರು. ಶ್ರೀಗಳ ಅನುಷ್ಠಾನ ಸಮಾಪ್ತಿಯ ವಿಷಯ ಎಲ್ಲಾ ಕಡೆ ವ್ಯಾಪಿಸಲು ಸಾವಿರಾರು ಜನ ಭಕ್ತಾದಿಗಳು ಬಂದು ನೆರೆದು ಶ್ರೀಗಳಲ್ಲಿ ಶ್ರದ್ಧಾ ಭಕ್ತಿಯುಳ್ಳವರಾದ್ದರಿಂದ ಕಳಸ, ಕನ್ನಡಿ, ಛತ್ರ ಚಾಮರ, ವಾದ್ಯ ವೇದೋಪನಿಷದಾಗಮ ಘೋಷ ಸಮೇತ ಶ್ರೀಗುರು ಫಿರಂಗೀಶ್ವರನನ್ನು ಪಲ್ಲಕ್ಕಿಯಲ್ಲಿ (ಆಂದೋಲಿಕ) ಉತ್ಸವ ಮಾಡಿ ತಮ್ಮ ಭಕ್ತಿಯ ಕಾಣಿಕೆಯನ್ನು ಅರ್ಪಿಸಿದರು. ಶ್ರೀಗಳ ತಪೋನುಷ್ಠಾನ ಮಂಗಳವು ವಿಜೃಂಭಣೆಯಿಂದ ಸಮಾಪ್ತಿಯಾಗಲು ಕನಕಪುರ ತಾಲ್ಲೋಕಿನ ಚಿಕ್ಕಮುಕ್ಕೊಡಲು, ಬಿಳಿದಾಳೆ, ಕೂನೂರು, ಬಿಳಿಕಲ್ಲು, ಕೊಳಗೊಂಡಹಳ್ಳಿಗಳ ಶ್ರೀಮಠದ ಶಿಷ್ಯರು ಶ್ರೀಗಳಲ್ಲಿ ಬಂದು "ತಾವುಗಳು ನಮ್ಮ ಗ್ರಾಮಗಳಿಗೆ ಬಿಜಯಗೈದು ನಮ್ಮಗಳ ಮನೆಗಳಲ್ಲಿ ಶಿವಪೂಜಾನುಷ್ಠಾನ

ಮಾಡಿ, ನಮ್ಮಗಳಿಗೆ ದರ್ಶನಾಶೀರ್ವಾದ ಕೊಟ್ಟು ಉದ್ಧಾರ ಮಾಡಬೇಕೆಂದು ಶಿರಸಾಷ್ಟಾಂಗ ನಮಸ್ಕಾರ ಮಾಡಿ ಪ್ರಾರ್ಥಿಸಿಕೊಂಡರು.

ಧರ್ಮ ಪ್ರಚಾರ ಮಾಡುವುದು ಶ್ರೀಗಳವರ ಸಹಜ ಗುಣವಾದ್ದರಿಂದ ಶಿಷ್ಯರ ಪ್ರಾರ್ಥನೆಯನ್ನು ಸ್ವೀಕರಿಸಿ ಆಯಾಯ ಗ್ರಾಮಗಳ ಭಕ್ತರ ಮನೆಗಳಿಗೆ ಹೋಗಿ ಶಿವಪೂಜಾನುಷ್ಠಾನವನ್ನು ಕೈಗೊಂಡು ಅವರುಗಳು ಅರ್ಪಿಸಿದ ಬಿಕ್ಷೆ ಮತ್ತು ದಕ್ಷಿಣಾದಿಗಳನ್ನು ಸ್ವೀಕರಿಸಿ ಶಿವಸಾಕ್ಷಾತ್ಕಾರಕ್ಕೆ ಸಾಧನಗಳಾದ ಶಿವದೀಕ್ಷಾ, ಷಟ್‌ಸ್ಥಳ, ಅಷ್ಟಾವರಣ, ಪಂಚಾಚಾರಗಳ ವಿಷಯವನ್ನು ಬೋಧಿಸಿ, 'ಯಾವನು ಯಾವಾಗಲೂ ಶಿವಯೋಗಿಯಿಂದ ಪಾರಮಾರ್ಥಿಕ ಶಿಕ್ಷಣವನ್ನು ಪಡೆಯುವನೋ, ಮತ್ತು ಆ ಶಿವಯೋಗಿಯ ಪ್ರಸಾದದಿಂದ ಮೋಕ್ಷವನ್ನು ಪಡೆಯಲು ಬಯಸುವನೋ, ಅವನೇ ನಿಜವಾದ ಶಿಷ್ಯನು.

ಗುರುಮೇವ ಶಿವಂ ಪಶ್ಯೇ ಶಿವಮೇವ ಗುರುಂತಥಾ । 5
ನೈತ ಯೋರಂ ತರಂ ಕಿಂಚಿತ್ ವಿಜಾನೀ ಯಾದ್ವಿಚಕ್ಷಣಃ ॥

ಬುದ್ಧಿಶಾಲಿಯಾದ ಶಿಷ್ಯನು ಗುರುವನ್ನೇ ಶಿವನನ್ನಾಗಿಯೂ, ಶಿವನನ್ನೇ ಗುರುವನ್ನಾಗಿಯೂ ತಿಳಿಯಬೇಕು. ಇವರಿಬ್ಬರಲ್ಲಿಯೂ, ಯಾವ ಭೇದ ಭಾವನೆಯನ್ನು ಮಾಡಬಾರದು. ಶಿಷ್ಯನು ಶ್ರೀ ಗುರುವಿನ ಆಜ್ಞಾಮಾತ್ರದಿಂದಲೇ ಶಿವಜ್ಞಾನದಲ್ಲಿಯೂ, ಶಿವಧ್ಯಾನದಲ್ಲಿಯೂ, ಸದಾ ಶಿವ ಧರ್ಮದಲ್ಲಿಯೂ, ಅತ್ಯಂತ ವಿಶ್ವಾಸವಿಡಬೇಕು. ಶ್ರೀ ಗುರುವಿನ ಅಪ್ಪಣೆಯನ್ನು ಮೀರಬಾರದು, ಭವರೋಗಕ್ಕೆ ಔಷಧಿ ಸ್ವರೂಪವಾದ ಜ್ಞಾನವನ್ನು ಸದ್ಗುರುವಿನಿಂದ ಪಡೆದು ಸುಖಿಯೂ, ಶಾಂತನೂ, ಸಂತೋಷಯುಕ್ತನೂ ಆಗಿ ಜೀವನ್ಮುಕ್ತನಾಗುವನು. ಶ್ರೀ ರೇಣುಕಾಚಾರ್ಯರು ಅಗಸ್ತ್ಯಮುನಿಗೆ ಉಪದೇಶ ಮಾಡುವಾಗ.

ಗುರೋಃ ಕಟಾಕ್ಷವೇಧೇನ ಶಿವೋಭವತಿ ಮಾನವಃ ।
ರಸವೇಧಾ ದ್ಯಥಾ ಲೋಹೋ ಹೇಮತಾಂಪ್ರತಿ ಪದ್ಯತೆ ॥ 6

ಎಂದರೆ:—ತಾಮ್ರ ಲೋಹವು ರಸ ವೇಧದಿಂದ ಹೇಗೆ ಸುವರ್ಣ

---

5 ಸಿದ್ಧಾಂತ ಶಿಖಾಮಣಿ ಪರಿಚ್ಛೇದ. 17

6 ಸಿದ್ಧಾಂತ ಶಿಖಾಮಣಿ ಪು. ೨೨

ವಾಗುವುದೋ ಹಾಗೆಯೇ, ಶಿಷ್ಯನು ಗುರುವಿನ ಕೃಪಾಕಟಾಕ್ಷ ವೇಧದಿಂದ ಶಿವನಾಗುವನು ಎಂದು ಹೇಳಿದ್ದಾರೆ. ಬಾಲಕರಾದ ಉಪಮನ್ಯು, ಪ್ರಹ್ಲಾದ, ಸಿದ್ಧರಾಮ, ಮಾರ್ಕಂಡೇಯ, ಕೋಳೂರು ಕೊಡಗೂಸು, ಧ್ರುವ ಮುಂತಾದ ವರೂ; ರಾಮ, ಕೃಷ್ಣ, ಅರ್ಜುನ, ವಿಭೀಷಣ, ಹನುಮ, ಮುಂತಾದ ಮಹಾ ಪುರುಷರು ಮತ್ತು ಮಹಾ ಋಷಿಗಳೂ, ರಾಜ ಋಷಿಗಳು, ಶರಣ-ಶರಣೆ ಯರೂ ಸದ್ಗುರುವನ್ನು ಆಶ್ರಯಿಸಿ ಅವರ ಅನುಗ್ರಹದಿಂದಲೇ ಶರಣಾಗತ ವತ್ಸಲನಾದ ಭಗವಂತನ ಸಾಕ್ಷಾತ್ಕಾರವನ್ನು ಪಡೆದು, ಜನ್ಮವನ್ನು ಸಾರ್ಥಕ ಮಾಡಿಕೊಂಡಿರುವರು. ಆದ್ದರಿಂದ ನೀವುಗಳು ಗುರೂಪದಿಷ್ಟ ಮಾರ್ಗ ವನ್ನೇ ಅನುಸರಿಸಿ ದಿವ್ಯ ಜ್ಞಾನವನ್ನು ಪಡೆದುಕೊಂಡು ನಿಮ್ಮ ನಿಮ್ಮ ಜನ್ಮ ವನ್ನು ಸಾರ್ಥಕ ಮಾಡಿಕೊಳ್ಳಬೇಕೆಂದು ಬೋಧಿಸಿದರು. ಶ್ರೀಗಳ ವೇದ ವಾಣಿಯನ್ನು ಕೇಳಿದ ಶಿಷ್ಯರು ಪುಲಕಿತರಾಗಿ ಆತ್ಮಾನಂದ ಪಟ್ಟರು. ಈ ರೀತಿ ಶಿಷ್ಯರಿಗೆ ನಿತ್ಯ ವ್ಯವಹಾರಗಳಲ್ಲಿ ಆಧ್ಯಾತ್ಮಿಕ ನಿಷ್ಠೆಯನ್ನು ಅಳವಡಿಸಿಕೊಂಡು ಆಚರಿಸಬೇಕೆಂದು ಉಪದೇಶಿಸಿದರು. ಅಷ್ಟರಲ್ಲಿ ಕುಣಿಗಲ್ ತಾಲ್ಲೋಕು ಎಡೆಹಳ್ಳಿ ಗ್ರಾಮದ ಭಕ್ತರು ಬಂದು ಸಮಸ್ಕರಿಸಿ, ಗುರುವರ್ಯರೆ, 'ಬಹುದಿನ ಗಳಿಂದಲೂ ನಮ್ಮ ಗ್ರಾಮದ ಮೇಲೆ ತಮ್ಮ ಕೃಪೆಯಾಗಲಿಲ್ಲ. ತಾವು ಒಂದುಸಾರಿ ನಮ್ಮ ಗ್ರಾಮಕ್ಕೆ ದಯಮಾಡಬೇಕು' ಎಂದು ಪ್ರಾರ್ಥಿಸಿ ಕೊಳ್ಳಲು, ಅವರುಗಳ ಬಿನ್ನಹವನ್ನು ಸ್ವೀಕರಿಸಿ ಚಿಕ್ಕಮುಕ್ಕೋಡಲಿನಿಂದ ಎಡೆಹಳ್ಳಿ ಗ್ರಾಮಕ್ಕೆ ದಯಮಾಡಿಸಿದರು.

## ಶಿಲಾಪೀಠದ ಮಹಿಮೆ

ಶ್ರೀಗಳು ಎಡೆಹಳ್ಳಿ ಗ್ರಾಮದ ಭಕ್ತರ ಅಪೇಕ್ಷೆಯಂತೆ ಬಹುದಿನಗಳು ಇದ್ದರೆಂದು ಜನರು ಹೇಳುತ್ತಾರೆ. ಈ ಮಹಿಮರು ಬಹುದಿನಗಳು ಈ ಗ್ರಾಮದಲ್ಲಿ ಇದ್ದುದರಿಂದ ಶ್ರೀಗಳ ಅನೇಕ ಪವಾಡಗಳನ್ನು ಜನರು ಕಣ್ಣಾರೆ ಕಂಡು ಆನಂದಿಸಿ, ಜನರಿಂದ ಜನರಿಗೆ ಪ್ರಚಾರದಲ್ಲಿ ಬಂದವುಗಳನ್ನು ಸೂಕ್ಷ್ಮ ವಾಗಿ ಇಲ್ಲಿ ವರ್ಣಿಸಲಾಗಿದೆ. ಶ್ರೀ ಘಿರಂಗೀಶ್ವರರು ಈ ಗ್ರಾಮದ ಮುಂಭಾ ಗದಲ್ಲಿ ಒಂದು ಬಂಡೆಯ ಮೇಲೆ ಕುಳಿತು ಅನೇಕ ಶಿಷ್ಯರ ಸಂದೇಹಗಳನ್ನು, ನ್ಯಾಯಗಳನ್ನು ತೀರ್ಮಾನಿಸುತ್ತಿರಲು, ಒಮ್ಮೆ ಶ್ರೀಗುರು ಒಬ್ಬ ಗೃಹಸ್ಥನ

ನ್ಯಾಯ ತೀರ್ಮಾನಮಾಡಿ ಪೂಜೆಗೆ ಹೋಗಲು, ಅಲ್ಲಿಯೇ ಕುಳಿತಿದ್ದ ಒಬ್ಬ ಅಹಂಕಾರಿಯು ಶ್ರೀಗಳು ಕುಳಿತುಕೊಂಡ ಆಸನದಲ್ಲಿ ಕುಳಿತುಕೊಳ್ಳ ಬಾರದು ಎಂದು ಹೇಳಿದಾಗ್ಯೂ ಅಹಂಭಾವದಿಂದ ಕುಳಿತುಕೊಳ್ಳಲು, ಆ ಶಿಲಾಶಾಸನವು (ಕಲ್ಲು ಬಂಡೆ) ಆತನು ಮೇಲೆ ಏಳದಂತೆ ಅಲ್ಲಿಯೇ ಬಿಗಿಯಾಗಿ ಹಿಡಿದುಕೊಳ್ಳಲು ಗಾಬರಿಯಿಂದ ಭಯಗೊಂಡು ಅಲ್ಲಿಯೇ ಕುಳಿತಿದ್ದ ಶ್ರೀಗಳವರ ಶಿಷ್ಯರನ್ನು ನಾನು ತಿಳಿಯದೆ ಹೀಗೆ ಮಾಡಿದೆ ಇನ್ನೊಮ್ಮೆ ಮಾಡುವುದಿಲ್ಲ ಶ್ರೀಗಳವರಿಗೆ ಹೇಳಿ ನಾನು ಮೇಲೇಳುವಂತೆ ಮಾಡಬೇಕೆಂದು ಕೇಳಿಕೊಂಡನು. ಆಗ ಶಿಷ್ಯರು ಶ್ರೀಗುರುವಿದ್ದೆಡೆಗೆ ಹೋಗಿ ವಿಷಯ ತಿಳಿಸಲು, ಶಿವಯೋಗಿಗಳು ಬಂದು ಹಸ್ತಸ್ಪರ್ಶ ಮಾಡಲು, ಹಿಡಿದಿದ್ದ ಶಿಲಾಶಾಸ ನವು ಆತನನ್ನು ಬಿಟ್ಟಿತು. ಅಲ್ಲಿ ನೆರೆದಿದ್ದ ಜನತೆಯನ್ನು ನೋಡಿ ಪೂಜ್ಯರು, "ಶ್ರೀ ಗುರುವಿನಲ್ಲಿ ಯಾವಾತನು ಪೂಜ್ಯಭಾವವುಳ್ಳವನಾಗಿರುತ್ತಾನೆಯೋ, ಆ ಗುರುವು ಉಪಯೋಗಿಸಿದ ವಸ್ತುಗಳಲ್ಲಿಯೂ ಅದೇ ಭಾವನೆವುಳ್ಳಾತನಿಗೆ ಶ್ರೇಯಸ್ಸು ದೊರೆಯುತ್ತದೆ.

'ಗುರುವತ್ ಗುರೋರಾಸನಂ ನೋಲ್ಲಘನೀಯಂ' ಎಂಬುದಾಗಿ ವಿಧಿಯಿರುತ್ತದೆ. ಗುರುವನ್ನು ಹೇಗೆ ಉಲ್ಲಂಘಿಸಬಾರದೋ ಹಾಗೆಯೇ ಅವರ ಆಸನವನ್ನು ಉಲ್ಲಂಘಿಸಬಾರದೆಂಬ ನೇಮದಂತೆ.

ಪಾದ.ಕಾಸನ ಶಯ್ಯಾದಿ ಗುರುಣಾಂ ಯದಧಿಷ್ಠಿತಮ್ ।
ನಮಸ್ಕುರ್ವೀತ ತತ್ಸರ್ವಂ ಪಾದಾಭ್ಯಾಂ ನಸ್ಪೃಶೇತ್ಕ್ವಚಿತ್ ॥

"ಗುರುವಿನಿಂದ ಉಪಯೋಗಿಸಲ್ಪಡುವ ಪಾದುಕೆ, ಪೀಠ, ಹಾಸಿಗೆ ಮುಂತಾದುವುಗಳನ್ನು (ತಲೆ ಬಾಗಿಸಿ ಕೈ ಜೋಡಿಸಿ) ನಮಸ್ಕರಿಸಬೇಕು. ಯಾವ ಕಾರಣದಿಂದಾದರೂ ಅವುಗಳನ್ನು ಮುಟ್ಟಬಾರದು "ಎಂದು ನುಡಿಯಲು" ಆನಾಸ್ತಿಕನಿಗೆ ಅಹಂಕಾರವು ನಾಶವಾಗಿ ಶ್ರೀಗುರು ವಿನಲ್ಲಿ ಶ್ರದ್ಧಭಕ್ತಿಯುಳ್ಳವನಾಗಿ ತನ್ನ ಗೃಹಕ್ಕೆ ಶ್ರೀಗಳನ್ನು ಕರೆದುಕೊಂಡು ಹೋಗಿ ಪಾದಪೂಜೆಮಾಡಿ ಭಕ್ತಿ ವಿನಯಗಳಿಂದ ಕಳುಹಿಸಿಕೊಟ್ಟನು. ಈ ಪವಾಡ ನಡೆದ ಮೇಲೆ ಆ ಗ್ರಾಮದ ಭಕ್ತಾದಿಗಳಿಗೆ ಶ್ರದ್ಧಾ ಭಕ್ತಿಗಳು ಇಮ್ಮಡಿಯಾದವು. ಈ ಶಿಲಾಸನದ ಪವಾಡದ (ಮಹಿಮೆ) ಆ ಪ್ರದೇಶದಲ್ಲಿ

ಈಗಲೂ ಕೂಡ ಜನಶೃತಿಯಲ್ಲಿ ಇರುತ್ತದೆ. ಆ ಶಿಲೆಯೂ ಕೂಡ ಆ ಗ್ರಾಮದಲ್ಲಿ ರುತ್ತದೆ. ಅದನ್ನು ಗ್ರಾಮದವರು ಪೂಜ್ಯಭಾವದಿಂದ ನೋಡಿಕೊಳ್ಳುತ್ತಾರೆ.

## ಬಾಳೆಹಣ್ಣು ಬಳಿಗೆ ಬಂದುದು

ಲೀಲಾಮೂರ್ತಿಗಳಾದ ಶಿವಯೋಗಿಗಳಿಗೆ ಮಕ್ಕಳು ಕಂಡರೆ ಪ್ರೇಮ. ಒಮ್ಮೆ ಎಡೆಹಳ್ಳಿ ಗ್ರಾಮದ ಬಾಲಕರೊಂದಿಗೆ ಹೊರಟು ಸಂತೆಯ ಮಾರ್ಗದಲ್ಲಿ ಒಂದು ಮರದ ಕೆಳಗೆ ಕುಳಿತು ಬಾಲಕರೊಂದಿಗೆ ಮಾತಾಡುತ್ತ ವಿನೋದ ದಿಂದ ಕಾಲ ಕಳೆಯುತ್ತಿರಲು ಅಂದು ಭಾನುವಾರವಾದ್ದರಿಂದ ಪಕ್ಕದ ಗ್ರಾಮದ ಸಿದ್ಧಮ್ಮನೆಂಬ ಮಹಿಳೆ ಒಂದು ಬಾಳೆಹಣ್ಣಿನ ಗೊನೆಯನ್ನು ಹೊತ್ತುಕೊಂಡು ಸಂತೆಗೆ ಹೋಗುತ್ತಿದ್ದಳು. ಬಾಳೆಹಣ್ಣನ್ನು ನೋಡಿದ ಬಾಲಕರು ಶಿವಯೋಗಿಗಳನ್ನು ನಮಗೆ ಬಾಳೆಹಣ್ಣು ತಿನ್ನಲು ಬೇಕೆಂದು ಪೀಡಿಸಿದರು. ಶ್ರೀಗಳು ಆ ಮಹಿಳೆಯನ್ನು ಕುರಿತು ''ತಾಯಿಒಂದು ಚಿಪ್ಪು ಬಾಳೆಹಣ್ಣನ್ನು ಕೊಡು ಮಕ್ಕಳು ಕೇಳುತ್ತಿವೆ. ದೇವರು ನಿನಗೆ ಒಳ್ಳೆಯ ದನ್ನು ಮಾಡುತ್ತಾನೆ” ಎಂದರು.

ಕೇಳಿದ ಮಹಿಳೆ, “ಐನೋರಿಗೇನು ಹೇಳೋಕ್ಕೆ ಯಾಪಾರಕ್ಕೆ ತಗೊಂಡು ಹೋಗೊ ಹಣ್ಣನ ಕೊಟ್ಟು ಬಿಡ್ತಾರ ?''

''ತಾಯಿ, ನಿನಗೆ ಸಂತೋಷ ಇದ್ದರೆ ಕೊಡು.''

“ಊಕೆಣ್ ಸ್ವಾಮಿ, ನಮ್ಮ ಧಣಿ ಬೈತಾರೆ,” ಎಂದು ಉದಾಸೀನವಾಗಿ ಮಾತಾಡಿ ಸುಮಾರು ಸ್ವಲ್ಪ ಮುಂದೆ ಹೋಗುವುದರೊಳಗೆ ತಲೆಯ ಮೇಲಿದ್ದ ಗೊನೆಯನ್ನು ಯಾರೋ ಹಿಂದಿನಿಂದ ಬಂದು ಎಳೆದಂತಾಯಿತು. ಹಿಂದಿರುಗಿ ನೋಡಿದರೆ ಮನುಷ್ಯನ ಸುಳಿವೇ ಇಲ್ಲ. ಪುನಃ ಮುಂದೆ ಎರಡು ಹೆಜ್ಜೆ ಇಡು ವುದರಲ್ಲಿ ಬಲವಾಗಿ ಎಳೆತ ಪ್ರಾರಂಭವಾಯಿತು. ಆಕೆಯ ಸಾಹಸವೆಲ್ಲ ವ್ಯರ್ಥವಾಯಿತು. ಮುಂದೆ ಒಂದು ಹೆಜ್ಜೆಯೂ ಇಡಲಾಗಲಿಲ್ಲ. “ಆ ಐನೋ ರಿಗೆ ಹಣ್ಣು ಕೊಡದೆ ಹೋದುದಕ್ಕೆ ಇಂಗಾಯಿತಲ್ಲ'' ಅಂದುಕೊಂಡು ಮರಳಿ ಶ್ರೀಗಳು ಕುಳಿತಿದ್ದ ಮರದ ಹತ್ತಿರ ಬಂದು ಎರಡು ಚಿಪ್ಪು ಬಾಳೆಹಣ್ಣನ್ನು ಶ್ರೀಗಳಿಗಿತ್ತು ಭಕ್ತಿಯಿಂದ ನಮಸ್ಕರಿಸಿ, 'ಸ್ವಾಮಿ, ನನಗೆ ತಿಳಿಯದೆ ಹೀಗೆಲ್ಲ ಮಾಡಿದೆ. ತಾವು ದೊಡ್ಡವರು, ನನ್ನ ತಪ್ಪನ್ನು ಕ್ಷಮಿಸಿ ಆಶೀರ್ವಾದ

ಕೊಡಿ ದೇವರು, ಎಂದು ಭಯದಿಂದ ಕೇಳಿಕೊಂಡಳು: ಶ್ರೀಗಳು ತಾಯಿ, ನೀನು ತಿಳಿದೊ, ತಿಳಿಯದೆಯೋ ಹೀಗೆ ಮಾಡಿರುವೆ, ನಿನ್ನನ್ನು ಕ್ಷಮಿಸಿ ಆಶೀರ್ವದಿಸುತ್ತಲಿದ್ದೇವೆ. 'ಶಿವಯೋಗಿಗೆ ಇತ್ತ ದಾನ ಶಿವನಿಗೆ ಕೊಟ್ಟಷ್ಟೇ ಫಲ ಬರುತ್ತದೆ' ಮುಂದೆ ಹೀಗೆ ಮಾಡಬೇಡ ಎಂದು ಹೇಳಿ ಕಳುಹಿಸಿದರು. ಆಗ ಮುಂದೆ ಸುಖಕರವಾಗಿ ಪ್ರಯಾಣಮಾಡಿ ಸಂತೆಯಲ್ಲಿ ಒಂದಕ್ಕೆ ಎರಡರಷ್ಟು ಹಣವನ್ನು ಸಂಪಾದಿಸಿಕೊಂಡು ತನ್ನ ಗ್ರಾಮಕ್ಕೆ ಬಂದು ಮಾರ್ಗದಲ್ಲಿ ನಡೆದ ವಿಷಯವನ್ನು ಅಕ್ಕಪಕ್ಕದವರ ಮನೆಯವರಿಗೆ ಹೇಳಿದಳು. ಶ್ರೀಗಳು ಹುಡುಗರಿಗೆ ಹಣ್ಣು ಕೊಟ್ಟು ತೃಪ್ತಿಪಡಿಸಿದರು. ಮುಂದೆ ಈ ಮಹಿಮೆ, ಆ ಮಹಿಳೆಯಿಂದಲೂ, ಹಣ್ಣು ತಿಂದ ಹುಡುಗರಿಂದಲೂ ಪ್ರಚಾರವಾಗಿ ಇಂದೂ ಜನವಾಡಿಕೆಯಲ್ಲಿ ಇರುತ್ತದೆ

ಹೀಗೆ ಪೂಜ್ಯ ಶ್ರೀ ಫಿರಂಗೀಶ್ವರರು ಅನೇಕ ಗ್ರಾಮಗಳಲ್ಲಿ ಸಂಚರಿಸಿ ಅವರುಗಳಿಗೆ ಶಿವಭಕ್ತಿ ಮೂಡುವಂತೆ ಧರ್ಮೋಪದೇಶಮಾಡಿ ನಾಡಿನ ಜನತೆಗೆ ಉತ್ತಮ ಮಾರ್ಗದರ್ಶನ ಮಾಡಿರುತ್ತಾರೆ. ಪೂಜ್ಯ ಪಾದರ ದಿವ್ಯ ಪ್ರತಿಭೆಗೆ ಒಳಗಾದ ಸಾಧಕರೆಲ್ಲರೂ ಪೂರ್ಣತೆಯನ್ನು ಪಡೆದು ಪಾವನರಾದರು. ಸಾಧಕರು ಸಿದ್ಧರಾದರು.

ಶ್ರೀಗಳ ಪ್ರತಿಭೆಗೆ ಒಳಗಾದ ಶಿವಯೋಗಿಗಳು ತಮ್ಮ ತಮ್ಮ ಕಾರ್ಯಕ್ಷೇತ್ರಗಳಲ್ಲಿ, ಶಿಷ್ಯರಿಗೆ 'ಶ್ರೀ ಗುರು ಫಿರಂಗೀಶ್ವರರ ಕುರಿತು ಮಹಿಮೆಯನ್ನು ಉಪದೇಶಿಸಿರುವುದು ಅನೇಕ ಗ್ರಂಥಗಳಲ್ಲಿ ನೋಡಬಹುದು. ಹಿರೇಕಲ್ ಶ್ರೀ ಚನ್ನಬಸವ ಶಿವಯೋಗಿಗಳು ತಮ್ಮ ಶಿಷ್ಯರಿಗೆ ಶ್ರೀ ಗುರುವಿನ ಮಹಿಮೆಯನ್ನು ಹೀಗೆ ನಿರೂಪಿಸಿರುತ್ತಾರೆ. "[7] ಸದ್ಗುರುವು ಪುಣ್ಯ ಕರ್ಮಿಗಳಿಗೆ ಸಾಕ್ಷಾತ್ ಶಿವನಂತೆಯೂ, ಪಾಪ ಕರ್ಮಿಗಳಿಗೆ ಮನುಷ್ಯನಂತೆಯೂ ತೋರಿ ಬರುವನು. ಕುಪ್ಪೂರು ಪೀಠದ ಮರುಳಸಿದ್ದೇಶ್ವರರು, ಹಿರೇಕಲ್ ಬೆಟ್ಟದ ಸಿದ್ದೇಶ್ವರರು, ಅಂಕನಹಳ್ಳಿ ಗವೀಮಠದ ಫಿರಂಗಿಸ್ವಾಮಿಗಳೂ ಮನುಷ್ಯರಂತೆ ಕಂಡರೂ ಅವರು ಶಿವನೇ ಆಗಿದ್ದರಿಂದ ಅವರ ಮಹಿಮೆ ಇನ್ನೂ ಪ್ರಜ್ವಲಿಸುತ್ತಿದೆ.

7 ಹಿರೇಕಲ್ ಬೆಟ್ಟದ ಶ್ರೀ ಚನ್ನಬಸವ ಶಿವಯೋಗಿಗಳ ಚರಿತ್ರೆ, ಪ್ರ. 57

ಈ ತ್ರಿಮೂರ್ತಿಗಳಲ್ಲಿ ಒಬ್ಬರಾದ ಶ್ರೀ ಫಿರಂಗಿ ಸ್ವಾಮಿಗಳ ವಿಚಾರ ನಿಮಗೆ ತಿಳಿಯಬಯಸುತ್ತೇವೆ. ಶ್ರೀಗಳು ಕುಣಿಗಲ್ ಗವೀಮಠದಲ್ಲಿ ಅನುಷ್ಠಾನ ಮಾಡುತ್ತಿರುವಾಗ ಆ ನಾಡಿನ ಪಾಳೇಗಾರನು ಶ್ರೀಕ್ಷೇತ್ರದ ಮಾರ್ಗವಾಗಿ ಹೋಗುತ್ತಿರಲು ಶ್ರೀಮಠವನ್ನು ನೋಡಿ ಇಲ್ಲಿ ಯಾರೋ ಶತೃಗಳು ಇರಬಹುದೆಂದು ತಿಳಿದು "ಫಿರಂಗಿ"ಯಿಂದ ಹೊಡೆಸಲು "ಫಿರಂಗಿಗಳು ಪುಷ್ಪವಾಗಿ" ಬೀಳಲು ನಾಯಕನಿಗೆ ಪರಮಾಶ್ಚರ್ಯವಾಗಿ ಬಂದು ನೋಡಿ ಶ್ರೀಗಳವರ ಅಡಿದಾವರೆಗೆ ಎರಗಿ, ಕ್ಷಮೆ ಬೇಡಿ, ಅವರ ಮಹಿಮೆಗೆ ಸಂತೋಷಪಟ್ಟು ನಾಯಕನು ಐದು ಮಠಗಳನ್ನು * ಜಹಗೀರಿ ಹಾಕಿಕೊಟ್ಟು 'ತಾವು ಮಾನವರೆಲ್ಲ ದೇವರು' ಎಂದು ಹೇಳಿ ಶ್ರೀಗಳವರಿಂದ ಆಶೀರ್ವಾದ ಪಡೆದು ಹೋದನು. ಅಂದಿನಿಂದ ಮುಂದೆ ನಾಡಿನ ಭಕ್ತರೆಲ್ಲ "ಫಿರಂಗಿ ಸ್ವಾಮಿ"ಗಳು ಎಂದು ಕರೆಯುತ್ತಾರೆ. ಈ ಕಾರಣಗಳಿಂದ ಗುರು ಸಾಮಾನ್ಯನಲ್ಲ ..

ಅವನು ಶಿವನೇ ಆಗಿರುತ್ತಾನೆ. "ಶಿವಪಥವನರಿವೊಡೆ ಗುರುಪಥವೇ ಮೊದಲು "ಕಂಗಳ ಕತ್ತಲೆಯ ಕೆಡಿಸಿದ ರವಿಯ ಚಂದನದಂತಾಯಿತ್ತು ಗುರುವಿನುಪದೇಶ" 'ಜ್ಞಾನವೆಂಬ ಅಂಜನವ ಹಚ್ಚಿ ಶಿವಪಥವಿದೆಂದು ತೋರಿದ ಸದ್ಗುರು' ಇವೇ ಮುಂತಾದ ಶರಣರ ವಚನಗಳು ಗುರುತತ್ವವನ್ನು ಪ್ರತಿಪಾದಿಸಿವೆ. ಸೂರ್ಯನು ಹಗಲಿನಲ್ಲಿಯೂ, ಚಂದ್ರನು ರಾತ್ರಿಯಲ್ಲಿಯೂ ಗುರುವು ಸರ್ವದಾಶಿಷ್ಯನ ಹೃದಯ ಮಂದಿರದಲ್ಲಿರುವ ಅಜ್ಞಾನಾಂಧಕಾರವನ್ನು ಪರಿಹರಿಸುವರು. ಆದುದರಿಂದ ಗುರುವಿಗಿಂತ ಹೆಚ್ಚಾದ ತೀರ್ಥಗಳಿಲ್ಲ, ಗುರುಪಾದಕ್ಕಿಂತ ಹಿರಿದಾದುದು ಮತ್ತೊಂದು ಇರುವುದಿಲ್ಲ. ಶ್ರೀಗುರು ಚರಣದಲ್ಲಿ ಸಕಲ ಕಲ್ಯಾಣ ಗುಣಗಳೂ ಇರುತ್ತವೆ. ಹೀಗೆ ಶಿವಯೋಗಿಗಳು ಜನತೆಗೆ ಗುರುವಿನ ಮಹಿಮೆಯನ್ನು ವಿವರಿಸಿರುತ್ತಾರೆ.

* ಎಲಗಲಹಳ್ಳಿ, ತಾವರೆಕೆರೆ, ಹೂಲಿಕಟ್ಟೆ, ವಿರುಪಸಂದ್ರ, ಅಂಕನಹಳ್ಳಿ ಗವಿಮಠಗಳು

# ಮೂಲ ಗವಿಮಠ ಮತ್ತು ಪಂಚಮಠಗಳ ಪ್ರತಿಭೆ

ಶ್ರೀಗಳು ಪಡೆದ ಪಂಚಮಠಗಳು, ಕುಣಿಗಲ್, ಮಾಗಡಿ, ರಾಮನಗರ ತಾಲ್ಲೋಕಿಗೆ ಸೇರಿರುತ್ತವೆ. ಶ್ರೀ ಫಿರಂಗೀಶ್ವರರು ಅಂಕನಹಳ್ಳಿ ಶ್ರೀಗವಿ ಮಠವನ್ನು ಕೇಂದ್ರಪನ್ನಾಗಿ ಮಾಡಿಕೊಂಡು ಎಲ್ಲಾ ಮಠಗಳಲ್ಲಿಯೂ, ನಿತ್ಯ ಪೂಜೆ, ದಾಸೋಹ, ವ್ರತಾಚರಣೆ, ಪುರಾಣ ಪ್ರವಚನಗಳನ್ನು ನಡೆಸುತ್ತ ಬಂದ ಭಕ್ತಾದಿಗಳಿಗೆ ದರ್ಶನಾಶೀರ್ವಾದ ಕೊಡುತ್ತ ಕುಣಿಗಲ್, ಗವಿಮಠ, ರೇವಣಸಿದ್ಧೇಶ್ವರಬೆಟ್ಟ, ನೂರೊಂದುಸ್ವಾಮಿಬೆಟ್ಟ, ಸಾವಂದುರ್ಗ, ಹುತ್ರಿ ದುರ್ಗ, ಹುಲಿಯೂರ್ ದುರ್ಗದ ವಾಡೆಭೈರವೇಶ್ವರನ ಗವಿ ಮುಂತಾದ ಕಡೆ ಅನುಷ್ಠಾನ ಮಾಡಿ ಪರಿಪೂರ್ಣಸಿದ್ಧರಾಗಿ, ತಾವು ಕಂಡ ಶಿವನ ಬೆಳಕನ್ನು ಜಗತ್ತಿಗೆ ಹರಡಲು ಈ ಪಂಚಮಠಗಳನ್ನೇ ಧರ್ಮದ ಪೀಠಗಳನ್ನಾಗಿ ಮಾಡಿದರು.

ಆಗಿನ ಕಾಲದಲ್ಲಿ ಭಕ್ತರಲ್ಲಿ ನಾಸ್ತಿಕತೆಯು ಹೆಚ್ಚು ಕಂಡು ಮನನೊಂದ ಶ್ರೀಗಳು "ಭಕ್ತನಾಗಿ ಭವನಾಸ್ತಿಯಾಗದಿದ್ದರೆ, ಆ ಉಪದೇಶ ಕೊಟ್ಟ ಗುರು ಪಡೆದ ಶಿಷ್ಯ ಇವರಿಬ್ಬರ ಮನೆಯಲ್ಲಿ ಮಾರಿ ಹೋಗಲಿ, ಗುಹೇಶ್ವರಲಿಂಗ ಅತ್ತೆಲೆ ಹೋಗಲಿ" ಎಂದು ಶರಣರ ನುಡಿಗಳನ್ನು ಜನರಿಗೆ ಅರಿವು ಮಾಡಿಕೊಡುತ್ತಾರೆ. ಗುರು, ಭವಿಯನ್ನು ಭಕ್ತನನ್ನಾಗಿಸಿ, ಅವನ ಪೂರ್ವಾಶ್ರಯದ ಭವಿತನವನ್ನು ಕಳೆದು ಭಗವತ್ ಸ್ವರೂಪವನ್ನು ದೊರಕಿಸಿ ಕೊಟ್ಟ ಮೇಲೆ, ಮರಳಿ ಪೂರ್ವಸ್ಥಿತಿಯನ್ನು ಸ್ಮರಿಸುವಾತ ಗುರುದ್ರೋಹಿ. ಆತನು ಶಿವಪಥಕ್ಕೆ ಸಲ್ಲನು. ಸರ್ವಕ್ಕೂ ಕಾರಣನಾದ ಶಿವನನ್ನು ತಿಳಿದು ಶಿವಜೀವೈಕ್ಯ ಸಾಮರಸ್ಯದೊಳಗಾಡುವನೇ ಸದ್ಭಕ್ತನೆನಿಸುವನು. ಆದರೆ ಲಿಂಗವನ್ನು ತನ್ನೊಳಗೆ ಸಮಾವೇಶಗೊಳಿಸಲು ಸತ್‌ಕ್ರಿಯಾಚರಣೆಗಳು ಅವಶ್ಯಕ, ಕ್ರಿಯಾಮಥನವಿಲ್ಲದೆ ಕಬ್ಬಿನೊಳಗಿನ ರಸದ ಮಾಧುರ್ಯಕಾಣಲಾರದು. ಹಾಗೆಯೇ, ಕ್ಷೀರದೊಳಗಿನ ತುಪ್ಪ ಕ್ರಿಯಾಮಥನವಿಲ್ಲದೆ ದೊರೆಯಲಾರದು. ಹೀಗೆಯೆ ಸತ್‌ಕ್ರಿಯಾಚರಣೆಯಿಂದ ಕರಸ್ಥಲದ ಶಿವಲಿಂಗವನ್ನು ಮನಸ್ಸಿಗೆ ತಂದು



ಮೂಲ ಗವಿಮಠದಲ್ಲಿ ಶ್ರೀಗಳು ಮತ್ತು ಲೇಖಕರು



ಮೂಲ ಗವಿಮಠದಲ್ಲಿರುವ ಶ್ರೀಗುರುಬಸವೇಶ್ವರ ಸ್ವಾಮಿಗಳ ಗದ್ದುಗೆ



ಶ್ರೀ ಗವಿಮಠದಲ್ಲಿರುವ ಶ್ರೀ ಬಸವಯ್ಯಸ್ವಾಮಿಗಳ ಕಾಲದ ಒಂದು ಶಾಸನ

ಕೊಂಡು, ಪ್ರಾಣಲಿಂಗವನ್ನು ಸರ್ವಾಂಗದೊಳಗೆ ಸಮನ್ವಯಿಸಿಕೊಂಡವನಿಗೆ ಶಿವನೊಡನೆ ಬೆರೆಯುವ ಶಿವಯೋಗ ಸಂಘಟಿಸುವುದು" ಎಂದು ಉಪದೇಶ ನೀಡುತ್ತ ಜನರನ್ನು ಶಿವಯೋಗದ ಕಡೆಗೆ ತಿರುಗಿಸಿ, ತಾವು ಶಿವಧ್ಯಾನ, ಶಿವ ಕೀರ್ತನೆ, ಶಿವವ್ರತಾಚರಣೆ ಮಾಡುತ್ತ ಶಿವಾನುಗ್ರಹದ ಕಡೆ ತಮ್ಮ ಪವಿತ್ರ ಕಾಲವನ್ನು ವ್ಯಯಮಾಡಲು ಪ್ರಾರಂಭಿಸಿದರು.

ಶ್ರೀಗಳು ತಮ್ಮ ಅಮೂಲ್ಯ ಕಾಲವನ್ನು ಶಿಷ್ಯರ ಕಲ್ಯಾಣಕ್ಕೂ, ಶಿವಾನುಷ್ಠಾನಕ್ಕೂ ಮೀಸಲು ಮಾಡಿದರು. ಆದರೆ ಶ್ರೀಮಠದ ಕಾರ್ಯ ಗಳು ನಡೆಯಬೇಕು. ಶ್ರೀಮಠಗಳ ಕಾರ್ಯಕಲಾಪಗಳು ವ್ಯವಸ್ಥಿತವಾಗಿ ನಡೆಸಬೇಕಾದರೆ ಗುರುತರ ಜವಾಬ್ದಾರಿಯು ಶ್ರೀ ಫಿರಂಗೀಶ್ವರರ ಮೇಲಿ ದ್ದುದ್ದರಿಂದ ಯೋಚಿಸಿ, ಆ ಜಾವಾಬ್ದಾರಿಯನ್ನು ಹಿಂದಿನಿಂದ ನಿರ್ವಹಿಸಿ ಕೊಂಡು ಬರುತ್ತಿದ್ದ ಕ್ಲೋಸ್‌ಪೇಟೆ ತಾಲ್ಲೋಕು ಹುಣಸೆ ದೊಡ್ಡಿಯ ಮಾಹೇಶ್ವರ ವಂಶಸ್ಥರಾದ, ಶ್ರೀ ಗುರುನಂಜಯ್ಯನವರನ್ನು ಮೂಲಗವಿಮಠ ಹಾಗೂ, ಪಂಚಗವಿಮಠಗಳ ವ್ಯವಸ್ಥಾಪಕರನ್ನಾಗಿ ನೇಮಿಸಿಕೊಂಡು ಅವರಿಗೆ ಆಡಳಿತವನ್ನು ವಹಿಸಿಕೊಟ್ಟರು. ಶ್ರೀಯುತರು ಶ್ರೀಗಳಲ್ಲಿ ಅನನ್ಯ ಭಕ್ತಿಯುಳ್ಳವರಾದ್ದರಿಂದ ಶ್ರೀಮಠಗಳ ಅಭಿವೃದ್ಧಿಗೂ, ಶ್ರೀಗಳ ಧರ್ಮ ಪ್ರಚಾರ ಕಾರ್ಯಕ್ಕೂ ಹೆಚ್ಚು ಶ್ರದ್ಧೆಯಿಂದ ಸೇವೆಸಲ್ಲಿಸಿ 'ಗುರು ಪುತ್ರ'ರೆಂದು ಕೀರ್ತಿ ಪಡೆದರು.

## ಶ್ರೀ ಮೂಲ ಗವಿಮಠ

ಪುರಾತನವಾದ ಈ ಗವೀಮಠವು ಕುಣಿಗಲ್ಲಿನಿಂದ ಎರಡು ಮೈಲಿ ದೂರದಲ್ಲಿ ನಿಸರ್ಗ ಸೌಂದರ್ಯದಿಂದ ಕೂಡಿ ತಪಸ್ವಿಗಳಿಗೆ ಸಿದ್ಧಿಯ ತಾಣ ವಾಗಿರುತ್ತದೆ. ಮಠವು ಎತ್ತರವಾದ ದಿಣ್ಣೆಯ ಮೇಲೆ ಒಂದು ವಿಶಾಲವಾದ ಬಂಡೆಯೊಳಗೆ ಗವಿಯಾಕಾರದಲ್ಲಿಯೇ ಇದ್ದು ಗವಿಮಠವೆನ್ನುವುದಕ್ಕೆ ಅನ್ವರ್ಥವಾಗಿರುತ್ತದೆ. ಗವಿಮಠದೊಳಗೆ ಹಿಂದಿನ ಮಠಾಧ್ಯಕ್ಷರಾಗಿದ್ದ ಶ್ರೀಗುರು ಗವಿ ಬಸವೇಶ್ವರ ಸ್ವಾಮಿಗಳ ಮತ್ತು ಶ್ರೀಗವಿ ಬಸವ ಶಿವಾಚಾರ್ಯ ಸ್ವಾಮಿಗಳ ಗದ್ದುಗೆಗಳು ಇರುತ್ತವೆ. ಮಠದ ಸುತ್ತಲೂ ನಾಲ್ಕು ಗುರು ಜಂಗಮರ ಪೀಠಗಳು ಇರುತ್ತವೆ. ಇವರ ಕಾಲ ನಾಮಧೇಯ ತಿಳಿಯದಾಗಿದೆ.

ಈ ಮಠದ ತಪಸ್ವಿಗಳಾದ ತ್ರಿಮೂರ್ತಿಗಳ ಗದ್ದುಗೆಗಳು ಮೂಗಂಡುಗ ಸೀಮೆ (ಗ್ರಾಮ)ಯಲ್ಲಿ ಇರುತ್ತದೆ. ಅವುಗಳಲ್ಲಿ, ಈರ್ವರ ನಾಮಧೇಯ ತಿಳಿಯುವುದಿಲ್ಲ. ಈ ಮಠಕ್ಕೆ ಹಿಂದಿನಿಂದ ಹದಿನಾಲ್ಕು ಜನ ಮಹಿಮಾಪುರುಷರು ಪೀಠಾಧೀಶ್ವರರಾಗಿ ಆಡಳಿತ ನಡೆಸಿ ಜನಜಾಗೃತಿಯುಂಟು ಮಾಡಿರುತ್ತಾರೆ. ಇವರುಗಳಲ್ಲಿ ಆರುಜನ ಶ್ರೀಗಳ ನಾಮಧೇಯಗಳು ದೊರೆಯದಾಗಿವೆ, ಹಾಲಿ ಆವರುಗಳ ಗದ್ದುಗೆಗಳು ಸಾಕ್ಷೀಭೂತವಾಗಿ ನಿಂತಿವೆ. ಇಂದಿನ ಮಠಾಧ್ಯಕ್ಷರಾದ ಶ್ರೀ ಸಿದ್ಧಲಿಂಗಶಿವಾಚಾರ್ಯರು ಹದಿನಾಲ್ಕನೆಯವರು. ಈ ಕಾರಣಗಳಿಂದ ಶ್ರೀಮಠವು ಸಾವಿರಾರು ವರ್ಷ ಪ್ರಾಚೀನವಾದುದೆಂದು ತಿಳಿದು ಬರುತ್ತದೆ. ಗವಿಯ ಮೇಲೆ ಪುರಾತನವಾದ ಬಸವನ ಪ್ರತಿಷ್ಠಾಪನೆಯಿರುತ್ತದೆ. ಸಮೀಪದಲ್ಲಿ ಇರುವ ಗ್ರಾಮದ ಹೆಸರೂ ಕೂಡ ಗವಿಮಠವೆಂದು ಕರೆಯುತ್ತಾರೆ. ಒಂದು ಕಾಲದಲ್ಲಿ ಗ್ರಾಮ ಮತ್ತು ಗ್ರಾಮದ ಜಮೀನೂ ಕೂಡ ಮಠದ ಆಸ್ತಿಯಾಗಿತ್ತು. ಕಾಲಕ್ರಮೇಣ ಅದನ್ನು ಶಿಷ್ಯರೇ ಅನುಭವಿಸಿಕೊಂಡು ಅವರ ಸ್ವಾಧೀನದಲ್ಲಿಯೇ ಇರುತ್ತದೆ. ಶ್ರೀ ಮಠದ ಕಟ್ಟಡ ವಿಶಾಲವಾಗಿದ್ದು, ಮಳೆ, ಗಾಳಿಯಿಂದಲೂ, ಕೆಲವು ಕಾಲ ಮೇಲ್ವಿಚಾರಣೆಯೂ ಇಲ್ಲದೆ, ಶಿಥಿಲವಾಗಿ ಹಾಲಿ ಎಂಟು ಅಂಗಣ ಕಲ್ಲು ಕಟ್ಟಡ ಮಾತ್ರ ನಿಂತಿರುತ್ತದೆ.

ಶ್ರೀಮಠದ ಹಿಂಭಾಗದಲ್ಲಿ ಒಂದು ನಿರ್ಮಲವಾದ ಕೊಳವಿದೆ. ಈ ಕೊಳದ ಜಲವನ್ನೇ ಶ್ರೀಮಠದ ಪೂಜೆಗೂ, ಮತ್ತು ದರ್ಶನಕ್ಕೆ ಬಂದ ಭಕ್ತಾದಿಗಳ ಉಪಯೋಗಕ್ಕೂ ಉಪಯೋಗಿಸುತ್ತಾರೆ. ಗವೀಮಠದಿಂದ ಬಲಭಾಗಕ್ಕೆ ನೂರು ಗಜ ದೂರದಲ್ಲಿ ಒಂದು ಶಿಲಾಶಾಸನವು ಇರುತ್ತದೆ. ಈ ಶಾಸನದ ವಿಚಾರ ಸರಿಯಾಗಿ ತಿಳಿದಿರುವುದಿಲ್ಲ.

ಹೆರೂರು, ಅರಕೆರೆ, ಗವಿಮಠದ ಗ್ರಾಮದ ಭಕ್ತಾದಿಗಳು ಮಠದ ಧಾರ್ಮಿಕ ಕಾರ್ಯದಲ್ಲಿ ಸೇವೆ ಸಲ್ಲಿಸುತ್ತಿರುತ್ತಾರೆ. ಶ್ರೀಮಠಕ್ಕೆ ಇತ್ತಾರು ಸಾವಿರ ಜನ ಶಿಷ್ಯರಿರುತ್ತಾರೆ. ಈ ಕ್ಷೇತ್ರದಲ್ಲಿ ಶ್ರಾವಣ, ಕಾರ್ತೀಕ, ಶಿವರಾತ್ರಿಯಲ್ಲಿ ನಡೆಯುತ್ತಿದ್ದ ಜಾತ್ರೆಯು ಈಗ ಕಾರಣಾಂತರಗಳಿಂದ ಶಿವರಾತ್ರಿಯಾದ ಏಳನೇ ದಿನ ನಡೆಯುತ್ತದೆ. ಸುತ್ತಮುತ್ತಲ ಗ್ರಾಮಗಳಲ್ಲಿ ಜಾನುವಾರುಗಳಿಗೆ ರೋಗಗಳು ಬಂದಾಗ ತಪಸ್ವಿಗಳಿಗೆ ಅರಿಕೆಮಾಡಿಕೊಂಡು ಮಠಕ್ಕೆ

ಬಂದು ಪೂಜೆಮಾಡಿಸಿ ತೀರ್ಥ ತೆಗೆದುಕೊಂಡು ಹೋಗಿ ಪ್ರೋಕ್ಷಣೆ ಮಾಡಿ ನಿವಾರಣೆ ಪಡೆಯುತ್ತಾರೆ. ಶ್ರೀಗಳು ಭಕ್ತರ ಇಷ್ಟಾರ್ಥಗಳನ್ನು ಈಗಲೂ ನೆರವೇರಿಸುತ್ತಿರುವುದು ಕಣ್ಣಾರೆ ಕಾಣಬಹುದಾಗಿದೆ.

ಶ್ರೀ ಘಿರಂಗೀಶ್ವರರ ಕಾಲದಲ್ಲಿ ನೂರಾರು ಜನ ತಪಸ್ವಿಗಳು, ಸಾಧಕರು, ಬಂದು ಶ್ರೀಗಳೊಡನೆ ಆಧ್ಯಾತ್ಮಿಕ ಚಿಂತನೆ ನಡೆಸಿ, ಅವರಿಂದ ಮಾರ್ಗದರ್ಶನ ಪಡೆದು ಹೋಗುತ್ತಿದ್ದರೆಂದು ಸ್ಥಳಾಧಾರದಿಂದ ತಿಳಿದುಬಂದಿದೆ. ಶ್ರೀಗಳು ಅನೇಕ ಭಕ್ತರಿಗೆ ದರ್ಶನವಿತ್ತು ಅವರ ಅಭಿಲಾಷೆಗಳನ್ನು ಈಡೇರಿಸಿರುವುದಕ್ಕೆ ಅನೇಕ ನಿದರ್ಶನಗಳಿವೆ. "1969ನೇ ಡಿಸೆಂಬರ್ ತಿಂಗಳು ಒಂದು ದಿನ ಮಧ್ಯರಾತ್ರಿಯಲ್ಲಿ ಗವೀಮಠದ ಸಮೀಪದಲ್ಲಿರುವ ಸರೋವರದ ಮಾರ್ಗದಿಂದ ನೂರಾರು ಜನ ತಪಸ್ವಿಗಳ ಮಧ್ಯದಲ್ಲಿ, ಶ್ರೀಗುರು ಘಿರಂಗೀಶ್ವರರು ಶಿರದಿಂದ ಪಾದದವರೆಗೆ ಎಳೆಯುವ ಜಟೆ, ಹಣೆಯಲ್ಲಿ ವಿಭೂತಿ, ಕೊರಳಲ್ಲಿ ರುದ್ರಾಕ್ಷಿ ಕೈಗಳಲ್ಲಿ ದಂಡ, ಕಮಂಡಲ, ಪಾದುಕೆಧರಿಸಿಕೊಂಡು ಸೂರ್ಯಪ್ರಕಾಶನ ದಂತೆ ಬೆಳಗುತ್ತ ಘಂಟೆ, ಜಾಗಟೆ, ಡಮರು, ಶಂಖ, ವಾದ್ಯಗಳ ಸಮೇತ ನಡೆದುಕೊಂಡು ಹೋದುದನ್ನು ಕಣ್ಣಾರೆ ಕಂಡ" ಶಿಷ್ಯನಾದ ಶ್ರೀ ತಿಬ್ಬಯ್ಯನು ಆನಂದದಿಂದ ಶ್ರೀ ಸಿದ್ಧಲಿಂಗಶಿವಾಚಾರ್ಯ ಸ್ವಾಮಿಜೀಯವರಿಗೂ ಶ್ರೀ ಜಿ. ವಿ. ಶಿವಸ್ವಾಮಿಯವರಿಗೂ ತಿಳಿಸಿದ. ಹೀಗೆ ಭಕ್ತಿಯುಳ್ಳ ಶಿಷ್ಯರಿಗೆ ದರ್ಶನವಿತ್ತಿರುತ್ತಾರೆ. ಆದ್ದರಿಂದ ಜನರು ಇಂದಿಗೂ ಶ್ರೀ ಘಿರಂಗೀಶ್ವರರು ಇದ್ದಾರೆ ಎಂದು ತಿಳಿದು ಭಕ್ತಿಯಿಂದ ನಡೆದುಕೊಳ್ಳುತ್ತಾರೆ. ಈ ಮಠ ಪಂಚ ಗವಿಮಠಗಳಿಗೂ ಮೂಲ ಮಠವಾಗಿರುತ್ತದೆ. ಕಾರಣಾಂತರಗಳಿಂದ ಶಿಥಿಲವಾಗಿದ್ದ ಈ ಮಠವನ್ನು ಶ್ರೀ ಸಿದ್ಧಲಿಂಗಶಿವಾಚಾರ್ಯಸ್ವಾಮಿಗಳು ಮತ್ತು ಭಕ್ತಾದಿಗಳು ಜೀರ್ಣೋದ್ಧಾರ ಮಾಡಿರುತ್ತಾರೆ.

## ೧. ಎಲಗಲಹಳ್ಳಿ ಗವಿಮಠ

ಈ ಮಠವು ಅಂಕನಹಳ್ಳಿ ಗವಿಮಠಕ್ಕೆ ಅತಿಸಮೀಪದಲ್ಲಿರುತ್ತದೆ. ಶ್ರೀ ಘಿರಂಗೀಶ್ವರರ ಕಾಲದಲ್ಲಿ ಇಲ್ಲಿ ಅನೇಕ ರಚನಾತ್ಮಕವಾದ ಧಾರ್ಮಿಕ ಕಾರ್ಯಕ್ರಮಗಳು ನಡೆದಿರುತ್ತವೆ. ಶ್ರೀಗಳು ಶಿಷ್ಯರ ಆಧ್ಯಾತ್ಮಿಕ ಚಿಂತನದ ಕಡೆ ಹೆಚ್ಚು ಗಮನವಿಟ್ಟು ಅವರ ನಡೆನುಡಿ ಆಚಾರಗಳನ್ನು ಸರಿಪಡಿಸಿ

ಅವರನ್ನು ಶಿವೋಪಾಸನದಕಡೆ ಪ್ರೇರೇಪಿಸಿದರು. ಗುರುವಿಲ್ಲದೆ ಯಾರಿಗೂ ಆತ್ಮಜ್ಞಾನದ ಅರಿವಾಗುವುದಿಲ್ಲ. ಆತ್ಮಜ್ಞಾನವಿಲ್ಲದೆ ಆತ್ಮಕಲ್ಯಾಣ ಸಾಧನೆಯೇ ಆಗಲಾರದು. ಯಾವಮಾನವನಿಗೆ ಆತ್ಮಕಲ್ಯಾಣದ ಬಯಕೆಯಿರುತ್ತದೆಯೋ ಅವರಿಗೆ ಮಾತ್ರವೇ ಗುರುಕರುಣೆಯಿಂದ ಆತ್ಮಕಲ್ಯಾಣ ದೊರೆಯುತ್ತದೆ. ಶ್ರೀ ಗುರು ಫಿರಂಗೀಶ್ವರರು ತ್ರಿಗುಣಾತೀತ ದಿವ್ಯಜ್ಞಾನದ ಶಿವಯೋಗದಲ್ಲಿ ನೆಲೆಸಿರುವುದರಿಂದ, ಅವರ ಕೃಪೆಯಿಂದ ಉತ್ತಮ ಸಾಧಕರಿಗೆಲ್ಲರಿಗೂ ಆತ್ಮ ಕಲ್ಯಾಣದ ಬಯಕೆ ಈಡೇರುವುದು. ಆದ್ದರಿಂದಲೇ, ಗುರುವನ್ನು ಜನರು ಸರ್ವದಾಶ್ರಯಿಸಿ ಸೇವೆ ಸಲ್ಲಿಸಿ ಇಷ್ಟಾರ್ಥಗಳನ್ನು ಪಡೆಯುತ್ತಿರುವರು. ಶ್ರೀಗಳ ಕಾರ್ಯಸಾಧನೆಗಳ ಕಡೆ ಚಿಂತನೆ ಮಾಡಿದವರಿಗೆ ಅರಿವಾಗದೆ ಇರ ಲಾರದು. ಶ್ರೀ ಫಿರಂಗೀಶ್ವರರು ಅಂದಿನ ಶಿಷ್ಯರ ಜೀವನದಲ್ಲಿ ಹೊಸ ಬೆಳ ಕನ್ನು, ಸ್ಫೂರ್ತಿಯನ್ನು ಹುಟ್ಟಿಸಿ ಅಂತರಂಗದ ಶಿವನಲ್ಲಿ ಸಮರಸವಾಗುವಂತೆ ಮಾರ್ಗದರ್ಶನ ಮಾಡಿ, ಪರಮೈಶ್ವರ್ಯಗಳನ್ನು ಅನುಗ್ರಹಿಸಿರುವರು. ಅಂದಿನ ಜನರಿಗೆ ಶ್ರೀ ಮಠವು ಅರಿವಿನ ಜ್ಞಾನಪೀಠವಾಗಿತ್ತು.

ಶ್ರೀಗಳವರ ಕಾಲವಲ್ಲಿಯೂ ತರುವಾಯ ಅರವತ್ತು ಎಕರೆ ಭೂಮಿ ಯಿದ್ದು ಇದರ ಉತ್ಪತ್ತಿ ಶ್ರೀಗಳವರ ಕೈಸೇರುತ್ತಿತ್ತು ಮಠವು ಹದಿನಾರು ಅಂಕಣ ವಿಸ್ತಾರವಾಗಿದ್ದು ಮಠ ಮತ್ತು ಜಮೀನಿನ ಸುತ್ತಲೂ ಲಿಂಗಮುದ್ರೆ ಕಲ್ಲುಗಳಿದ್ದುವು ಇಲ್ಲಿ ನಿತ್ಯ ಪೂಜೆ ಪ್ರಸಾದ ವಿತರಣೆ ಬಂದ ಭಕ್ತಾದಿಗಳಿಗೆ ನಡೆಯುತ್ತಿದ್ದುವು. ಶಿವರಾತ್ರಿಯಲ್ಲಿ ನಡೆಯುತ್ತಿದ್ದ ಕಾರ್ಯಕ್ರಮಕ್ಕೆ ಬಹು ದೂರದಿಂದ ಶಿಷ್ಯರು ಬಂದು ಭಾಗವಹಿಸಿ ಉತ್ಸವವನ್ನು ವಿಜೃಂಭಣೆಯಿಂದ ಆಚರಿಸುತ್ತಿದ್ದರು.

ಈ ಮಠದ ಮೇಲ್ವಿಚಾರಣೆ ಮಾಡುತ್ತಿದ್ದ ಹುಣಸೆ ದೊಡ್ಡಿಯ ಶ್ರೀ ಗುರುನಂಜಯ್ಯ ಮತ್ತು ಶ್ರೀ ಚನ್ನಬಸವಯ್ಯನವರು ಕಾಲಕ್ರಮೇಣ ಮಠದ ಆಸ್ತಿಯ ಮೇಲ್ವಿಚಾರಣೆಗೆ ಆ ಗ್ರಾಮಸ್ಥರನ್ನೇ ನೇಮಿಸಲು ಅನೇಕರ ವರ್ಷಗಳ ಕಾಲ ಕಂದಾಯ ಕಟ್ಟದೆ ಮತ್ತು ಅಕ್ರಮ ಸಾಗುವಳಿಯಿಂದ ಜಮೀನು ಕರಗಿಹೋಗಿರುತ್ತದೆ. ಈ ಮೂಲ ಮಠವಿದ್ದ ಭಾಗದಲ್ಲಿ ಯಾವ ಬೆಳೆಯೂ ಬೆಳೆಯುವುದಿಲ್ಲ. ವ್ಯವಸಾಯ ಮಾಡಿದರೆ ಅನೇಕ ತೊಂದರೆ ಗಳು ಉಂಟಾಗುವುದರಿಂದ ಪಾಳು ಬಿದ್ದಿರುತ್ತದೆ' ಮಠದ ಆಸ್ತಿಯು

ಸ್ವಾಧೀನ ತಪ್ಪಿರುತ್ತದೆ. ಇದು ಅಂಕಣ ಮಠ ಮಾತ್ರ ಸ್ಮಾರಕ ವಾಗಿ ನಿಂತಿರುತ್ತದೆ. ಈ ಎಲಗಲಹಳ್ಳಿ ಗವೀಮಠವು ಮಾಗಡಿ ತಾಲ್ಲೋಕಿಗೆ ಸೇರಿರುತ್ತದೆ. (1)

## (೨) ಹೂಲೀಕಟ್ಟೆ ಗವೀಮಠ

ಈ ಮಠವು ಶ್ರೀ ಫಿರಂಗೀಶ್ವರರ ತಪೋಬಲದಿಂದ ಒಂದು ಪುಣ್ಯಕ್ಷೇತ್ರ ವಾಗಿ ನಾಡಿನ ಎಲ್ಲಾ ವರ್ಗದ ಜನರ ಆಧ್ಯಾತ್ಮಿಕ ಬೆಳವಣಿಗೆಯ ಕೇಂದ್ರ ವಾಗಿತ್ತು. ಈ ಪ್ರದೇಶದ ಭಕ್ತರು ಶ್ರೀಗಳವರಿಂದ ಒಳ್ಳೆಯ ಮಾರ್ಗ ದರ್ಶನ ಪಡೆದಿರುತ್ತಾರೆ. ಶ್ರೀಗಳು ತಮ್ಮ ಧನುರ್ಮಾಸದ ಶಿವಪೂಜಾನು ಷ್ಠಾನವನ್ನು ಇಲ್ಲಿಯೇ ನಡೆಸುತ್ತಿದ್ದರು. ಅನೇಕ ವೇಳೆ ಶ್ರೀಗಳವರಲ್ಲಿ ಭಕ್ತರು ಬಂದು ತಮ್ಮ ತಮ್ಮ ದುಃಖಗಳನ್ನು ನಿವೇದಿಸಿಕೊಂಡು ಅವರಿಂದ ನಿವಾರಣೋಪಾಯ ಪಡೆದು ಅದರಂತೆ ನಡೆದು ಇಷ್ಟಾರ್ಥಗಳನ್ನು ಪಡೆಯು ತ್ತಿದ್ದರು. ಸಂಸಾರ ವ್ಯಾಮೋಹಕ್ಕೆ ಸಿಕ್ಕಿದ ಭಕ್ತರನ್ನು ಪೂಜ್ಯರು ನೋಡಿ, ಮಾನವನು ಭೋಜ್ಯ ವಸ್ತುಗಳನ್ನು ತನ್ನವೆಂದೂ, ತನಗಾಗಿವೆಯೆಂದು ಭಾವಿಸಿ, ಅವುಗಳ ಸಂಗ್ರಹಣೆಯಲ್ಲಿಯೇ ನಿರತನಾಗಿರುವನು ಭಕ್ತನಾಗಲಾರ. ಆದ್ದರಿಂದ ಅವನಿಗೆ ಸುಖವು ದೊರೆಯಲಾರದು. ಅವನು ಶ್ರಮವಹಿಸಿ ಗಳಿ ಸಿದರೂ ಅವುಗಳಿಂದ ಬರುವ ಸುಖವೂ ಕ್ಷಣಿಕ. ಸಾಸಿವೆಯಷ್ಟು ಸುಖ ಕ್ಕಾಗಿ ಸಾಗರದಷ್ಟು ದುಃಖವನ್ನು ಮಾನವ ಅನುಭವಿಸುತ್ತಿರುವನು. ಅಲ್ಪ ಶ್ರಮದಿಂದ ಅಲ್ಪ ಲಾಭ ಪಡೆಯುವ ಸಾಹಸ ಯಾರಿಗೂ ಹಿತವಲ್ಲ. ಅವಿ ವೇಕಿಯು ಗಳಿಗೆಯ ಸುಖಕ್ಕಾಗಿ ತನ್ನ ಗುರಿಯನ್ನೇ ಮರೆತು ಆತ್ಮ ಹಾನಿ

---

(1) * ಇನಾಮ್ ಕಮಿಷನರ್ ಆಫೀಸ್, ಗೌರ್ನಮೆಂಟ್ ಆಫ್ ದಿ ಮಹಾರಾಜ ಆಫ್ ಮೈಸೂರು (1876ನೆ ಇಸವಿ) ಆಗಿನ ಪ್ರಭುತ್ವದ ಅಧೀನದಲ್ಲಿದ್ದ ಪ್ರದೇಶಗಳ ಮುಖ್ಯ ನಿರ್ದೇಶಕರು ತಮ್ಮ ನಂ. 4358/ತಾ॥ 1-10-1876ರಲ್ಲಿ ಶ್ರೀ ಗವಿಮಠ (ಎಲಗಲ ಹಳ್ಳಿ)ಕ್ಕೆ ಕೆಲವು ಸರ್ವೆ ನಂಬರಿನ ಜಮೀನನ್ನು ಇನಾಮಾಗಿ ಕೊಟ್ಟು ಸರ್ವೆ ನಂ. 36, 38, 40, 41, ಆ ಜಮೀನಿಗೆ 20-00 ರೂ. ಕಂದಾಯ ಕೊಡುವಂತೆ ನಿರ್ದೇಶನವಿತ್ತಿದ್ದರು. ಈ ನಂಬರಿನ ಪ್ರತಿ ಶ್ರೀ ಮಠದಲ್ಲಿ ಈಗಲೂ ದಾಖಲೆ ಆಗಿದೆ.

ಯನ್ನೇ ಮಾಡಿಕೊಳ್ಳುತ್ತಿರುವನು. ಆದರೆ ಪಂಚೇಂದ್ರಿಯಗಳನ್ನು ತಿರಸ್ಕಾರ ಮಾಡದೆ, ಅವುಗಳನ್ನು ನಿಗ್ರಹಮಾಡಿ ಈಶ್ವರನ ಕಡೆ ತಿರುಗಿಸಿದರೆ ಅವುಗಳ ಸಹಾಯದಿಂದಲೇ ಭಕ್ತನು ಈಶ್ವರ ಪ್ರಸಾದವನ್ನು ಪಡೆದು ನಿತ್ಯ ಸುಖ ಶಾಂತಿಯನ್ನು ಪಡೆಯುತ್ತಾನೆ. ಆದ್ದರಿಂದ ಪ್ರತಿಯೊಬ್ಬರೂ ತಮ್ಮ ತಮ್ಮ ಕಾಯಕಮಾಡಿ, ಮಾಡುವ ವೃತ್ತಿ, ನೋಡುವ ದೃಷ್ಟಿ ಶಿವಪ್ರೀತ್ಯರ್ಥವಾದರೆ ಅವನಿಗೆ ಶಿವಾನುಗ್ರಹ ಉಂಟಾಗುತ್ತದೆ. ಕಾಯಕದ ಬಗ್ಗೆ ಬಸವೇಶ್ವರರು ಹೀಗೆಂದಿರುತ್ತಾರೆ.

> "ಕೃಷಿ-ಕೃತ್ಯ-ಕಾಯಕದಿಂದಾದರೇನು ?
> ತನು—ಮನವ ಬಳಲಿಸಿ ತಂದು ದಾಸೋಹವ ಮಾಡುವ
> ಪರಮ ಸದ್ಭಕ್ತನ ಪಾದವ ತೋರಯ್ಯ ಎನಗೆ ! *
> ಅದೆಂತೆನೆ ;
> ಆತನ ತನುಶುದ್ಧ ! ಆತನ ಮನ ಶುದ್ಧ !
> ಆತನ ನಡೆ ಶುದ್ಧ ! ನುಡಿಯೆಲ್ಲವು ಪಾವನ !
> ಆತಂಗೆ ಉಪದೇಶವ ಮಾಡಿದಾತನೆ ಪರಮ ಸದ್ಗುರು !
> ಅಂತಪ್ಪ ಸದ್ಭಕ್ತನ ಮನೆಯು ಕೈಲಾಸವೆಂದು ಹೊಕ್ಕು
> ಲಿಂಗಾರ್ಚನೆಯ ಮಾಡುವ ಜಂಗಮವೇ ಜಗತ್ಪಾವನ !
> ಇಂತಪ್ಪವರ ನಾನು ನೆರೆ ನಂಬಿ
> ನಮೋ ನಮೋ ಎಂಬೆನಯ್ಯ ಕೂಡಲ ಸಂಗಮದೇವ !

ಎಲ್ಲರೂ ದೀಕ್ಷೆ ಕೊಡುವರೇ, ಎಲ್ಲರೂ ದೀಕ್ಷೆ ಕೊಡುವರೇ, ಸ್ವಂತ ದುಡಿಮೆಯಿಂದ ಬಂದ ಶುದ್ಧ ಪದಾರ್ಥಗಳಿಂದ ಗುರುಲಿಂಗ ಜಂಗಮ ದಾಸೋಹ ಮಾಡುವೆನೆಂಬ ದೃಢ ನಿರ್ಧಾರವಿಲ್ಲದವನಿಗೆ ಕೊಡುವ ದೀಕ್ಷಾ ಸಂಸ್ಕಾರವೇನು, ಅವನು ಹೊಂದುವ ದೀಕ್ಷೆಯಿನ್ನೇನು, ದೃಢನಿರ್ಧಾರದ ಧೀರನಿಗೆ ಅನುವರಿತ ಗುರು ಕೈಯಲ್ಲಿ ಕೊಟ್ಟ ಕಲ್ಲು ಲಿಂಗವಾಗುವುದು, ಕಿವಿಯಲ್ಲಿ ಹೇಳಿದ ಮಾತು ಮಂತ್ರವಾಗುವುದು. ಆ ಜಾಡನ್ನು ಹಿಡಿದು, ದುಡಿದು ಬಂದ ದುಡಿಮೆಯಿಂದ ಜಗತ್ತನ್ನು ತಣಿಸಲು ಯತ್ನಿಸುವ ಭಕ್ತನೇ ಸಾಕ್ಷಾತ್ ಶಿವ, ಅವನ ಮನೆಯೇ ಕೈಲಾಸ. ಅಂತಹ ಮಹನೀಯನ ಮನೆ

* ಬಸವ ವಚನಾಮೃತ ಪು. 73

ಯಲ್ಲಿ ಶಿವಪೂಜೆ ಮಾಡಿ ಪ್ರಸಾದವನ್ನು ತೆಗೆದುಕೊಳ್ಳಬೇಕು ಜಂಗಮ! ಹಾಗಲ್ಲದೆ ಸಿರಿವಂತರ ಮನೆಯ ಸವಿಕಳವಳಕ್ಕೆ ಆಸೆಪಟ್ಟು ಸಾತ್ವಿಕನಾದ ಬಡವನ ಮನೆಯನ್ನು ಕಡೆಗಣಿಸಿದರೆ ಆ ಜಂಗಮ ಪತಿತನಾಗುವನು."

"ಸ್ವಂತ ದುಡಿಮೆಯಿಂದ, ಸರಳವಾಗಿ, ಲೋಕೋಪಯೋಗಿಯಾಗಿ, ಬಾಳುವ ಜನಬೇಕು, ಆ ಜನರನ್ನು ಪುರಸ್ಕರಿಸಿ ಹುರಿದುಂಬಿಸುವ ಜಂಗಮ ಬೇಕು. ಈ ಎರಡು ವಿಧವಾದ ಶ್ರೇಷ್ಠ ಜನರಿಂದಲೇ ಲೋಕಕಲ್ಯಾಣ ಸಾಧ್ಯ. ಭೂಮಿಯನ್ನು ಕೈಲಾಸವಾಗಿಸಲು ಬಸವೇಶ್ವರರು ನೆಚ್ಚಿಕೊಂಡಿದ್ದುದು ಇಂಥವರ ಬೆಂಬಲವನ್ನೇ."

ಶ್ರೀಗಳು ಈ ರೀತಿ ಶರಣರ ಕಾಯಕದ ತತ್ವಗಳನ್ನು ಜನರಿಗೆ ಉದಾಹರಿಸಿ 'ಕಾಯಕವೇ ಕೈಲಾಸ' ಆದ್ದರಿಂದ ಕಾಯಕದ ಕಡೆ ಹೆಚ್ಚು ಗಮನ ಕೊಟ್ಟು ದುಡಿಯಬೇಕು. ಎಲ್ಲಾ ಕಾಯಕಗಳು ಶ್ರೇಷ್ಠವೇ, ಆದರೆ ಅದು ಭಗವಂತನು ಮೆಚ್ಚುವಂತಿರಬೇಕು ಎಂದು ಜನರಿಗೆ ಉತ್ಸಾಹ ಬರುವಂತೆ ನಿರೂಪಿಸಿರುತ್ತಾರೆ.

ಶ್ರೀಗಳ ವಾಣಿಯಿಂದ ಚೇತನಗೊಂಡ ಶಿಷ್ಯರು, ಮಠದ ಕಾರ್ಯಗಳಿಗೆ ತನು ಮನ ಧನಗಳನ್ನು ಅರ್ಪಿಸಿ, ಕಾರ್ಯಗಳು ವಿಜೃಂಭಣೆಯಿಂದ ನಡೆಯುವಂತೆ ನೆರವಾಗುತ್ತಿದ್ದರು. ಶ್ರೀಗಳು ಬಿತ್ತಿದ ಬೀಜ ಫಲ ಕೊಟ್ಟಿದ್ದನ್ನು ನೋಡಿ ಆನಂದಪಡುತ್ತಿದ್ದರು.

ಶ್ರೀಮಠಕ್ಕೆ 60 ಎಕರೆ ಫಲವತ್ತಾದ ಭೂಮಿಯಿದ್ದು ಕಾಲಗರ್ಭದಲ್ಲಿ ಕರಗಿರುತ್ತದೆ. ಹಾಲಿ ಸ್ಮಾರಕವಾಗಿ ಮಂಟಪ ರೂಪದಲ್ಲಿ ಮಠವಿರುತ್ತದೆ. ತಪಸ್ವಿಗಳು ಗಳಿಸಿದ್ದನ್ನು ರಕ್ಷಣೆಮಾಡಿಕೊಂಡು ಬರಲಾರದ ನಾವುಗಳು ದುರ್ದೈವಿಗಳು. ಶ್ರೀಮಠವು ಮಾಗಡಿ ತಾಲ್ಲೋಕಿಗೆ ಸೇರಿರುತ್ತದೆ.

## ೩. ತಾವರೆಕೆರೆ ಗವೀಮಠ

ಶ್ರೀಗವೀಮಠ ಶ್ರೀ ಘಿರಂಗೀಶ್ವರರ ಕೃಪಾಬಲದಿಂದ ಭಕ್ತರ ಅಪೇಕ್ಷೆಗಳನ್ನು ಕೈಗೂಡಿಸುವ ಕಲ್ಪತರು ಎಂಬ ಹೆಸರಾಗಿರುತ್ತದೆ. ಶ್ರೀಮಠವು ಪಂಚ ಮಠಗಳಲ್ಲೊಂದಾಗಿರುತ್ತದೆ. ರೋಗಿಯು ರೋಗ ನಿವಾರಣೆಗಾಗಿ ವೈದ್ಯನ ಚಿಕಿತ್ಸೆಯನ್ನು ಅವಲಂಬಿಸಿರುವಂತೆ. ಭವರೋಗಿಯ ರೋಗನಿವಾರ

ಣೆಯೂ ಕೂಡ ಶಿವಾದ್ವೈತಾನುಭವದಲ್ಲಿ ಪರಿಪೂರ್ಣನಾದ ಗುರುವಿನ ಪಾರ ಮಾರ್ಥಾನುಭವವನ್ನು ಸಂಪೂರ್ಣವಾಗಿ ಅವಲಂಬಿಸಿರುವುದು.

"ಗುರು ವಚನದಿಂದಲ್ಲದೆ ಭವಪಾಶ ಹರಿಯದು
ಗುರು ವಚನದಿಂದಲ್ಲದೆ ಸದ್ಭಕ್ತಿ ನೆಲೆಗೊಳ್ಳದು
ಗುರು ವಚನದಿಂದಲ್ಲದೆ ನಿಜಮುಕ್ತಿ ಕಾಣಬಾರದು
ಇದು ಕಾರಣ ಗುರು ಮುಟ್ಟಿ ಗುರುವಾದ ಪರಮ
ಶರಣರ ಚರಣಕ್ಕೆ ಶರಣು ಶರಣೆಂಬೆನಯ್ಯ ಅಖಂಡೇಶ್ವರಾ

ಹೀಗೆ ಮಹಿಮೆ ನುಡಿಯಿರುವುದರಿಂದ ಗುರುವಿಲ್ಲದೆ ಯಾವುದೂ ದೊರೆಯಲಾರದು. ಜಗತ್ತಿನಲ್ಲಿ ಏನನ್ನಾದರೂ ಪಡೆಯಬಹುದು, ಆದರೆ ಕೈವಲ್ಯ ಕಲ್ಪತರುವೂ, ಜ್ಞಾನನಿಧಿಯೂ, ಶಿವಾದ್ವೈತ ಸಿದ್ಧಾಂತ ಪರಿಪೂರ್ಣನೂ ಆದ ಸದ್ಗುರುವನ್ನು ಪಡೆಯುವುದು ಸುಲಭವಲ್ಲ. ಅನೇಕ ಜನ್ಮಗಳ ಪುಣ್ಯವಿಶೇಷದಿಂದ ಅಂತಹ ಗುರುವಿನ ಅನುಗ್ರಹ ದೊರೆಯುವುದು.

ಈ ಪ್ರದೇಶದ ಅನೇಕ ಜನ ದುಃಖಿತರು, ರೋಗಿಗಳು ಸರ್ವಭಯ ಪೀಡಿತರು ಬಂದು ಶ್ರೀ ಗುರುವನ್ನು ಮೊರೆ ಹೋಗುತ್ತಿದ್ದರು. ಗುರುಗಳು ಬಂದು ಶಿಷ್ಯರ ಭವರೋಗ ನಿವಾರಣೆಗಾಗಿ ಶಿವಜ್ಞಾನ ರೂಪವಾದ ದಿವ್ಯೌಷಧಿಯನ್ನು, ವಿಭೂತಿ ಬಿಲ್ವಗಳನ್ನು ಅನುಗ್ರಹಿಸಿ ಉದ್ಧಾರಮಾಡಿರುವರು. ಶಿವಯೋಗಿಗಳ ತಪಶ್ಯಕ್ತಿಯನ್ನು ಅವರ ತ್ಯಾಗಮಯ ಜೀವನವನ್ನು ಕಂಡ ಶಿಷ್ಯರು "ಒಮ್ಮೆ ಸಂಗನ ಬಸವೇಶ್ವರರು ಬಂದು ಕಲ್ಯಾಣದಲ್ಲಿ, ಒಂದು ಮನೆಯ ಕಟ್ಟಿದರೆ ಮರ್ತ್ಯಲೋಕವೆಲ್ಲವೂ ಭಕ್ತಿಯ ಸಾಮ್ರಾಜ್ಯವಾಯಿತು. ಆ ಮನೆಗೆ ತಲೆಬಾಗಿ ಹೊಕ್ಕವರೆಲ್ಲರೂ ನಿಜಲಿಂಗ ಪದಮಂ ಪಡೆದರು" ಎಂಬ ವಚನವನ್ನುತಿಳಿದ ನೂರಾರು ಜನರು ಶ್ರೀಮಠಕ್ಕೆ ಬಂದು ಗುರುದರ್ಶನ ಪಡೆದು ಹೋಗತೊಡಗಿದರು.

"ಕೈವಲ್ಯ ಕಲ್ಪತರುವೋಗುರುವಃ ಕರುಣಾಲಯಾಃ । [2]
ದುರ್ಲಭಾಹಿ ಜಗತ್ಯಸ್ಮಿನ್ ಶಿವಾದ್ವೈತ ಪರಾಯಣಾಃ।

---

2. ಷಟ್‌ಸ್ಥಲ ಜ್ಞಾನ ಸಾರಾಮೃತ. viii

ಎಂಬ ನುಡಿಯು ಸತ್ಯವನ್ನೇ ನಿರೂಪಿಸುತ್ತಿರುವುದು. ಕಲ್ಪತರುವು ದೇವಲೋಕದ ಒಂದು ಮರ. ಅದು ಬಯಸಿದ್ದನ್ನು ನೀಡುವುದು. ಅದನ್ನು ನೋಡಿದವರ ಕಾಣೆ! ಕಾಣುವ ಕಲ್ಪತರುವು ಶ್ರೀ ಗುರುವು. ಆದ್ದರಿಂದಲೇ ಅವರನ್ನು ಆಶ್ರಯಿಸಿ ತಮ್ಮ ತಮ್ಮ ಮನೋಭಿಲಾಷೆಯನ್ನು ಪಡೆದು ಅದರ ಅನುಗ್ರಹದಿಂದ ಧನ್ಯರಾಗುತ್ತಿರುವರು,

ಶ್ರೀ ಫಿರಂಗೀಶ್ವರರು ತಾವರೆಕೆರೆ ಗವೀಮಠದ ಶಿಷ್ಯರನ್ನು ಭಗವದಾರಾಧನೆಯ ಕಡೆ ಪ್ರೇರೇಪಿಸಿ ಅವರ ಆತ್ಮ ಜ್ಯೋತಿಯಾಗಿರುವರು. ಮಠದಲ್ಲಿ ಕಾರ್ತೀಕ ಶ್ರಾವಣ ಮಾಸ, ವಿಶೇಷ ಸಂದರ್ಭಗಳಲ್ಲಿ ಅನುಷ್ಠಾನಮಾಡಿ ಉತ್ತಮ ಸಂದೇಶ ನೀಡಿರುತ್ತಾರೆ. ಅವರಸಂದೇಶವಿನ್ನೂ ಆ ಪ್ರದೇಶದಲ್ಲಿ ಶಬ್ಧಮಾಡುತ್ತಲೇ ಇರುತ್ತದೆ. ಅಂದಿನ ಕಾಲದ ಜನರಿಗೆ ಶ್ರೀಮಠವು ಆತ್ಮಜ್ಞಾನದ ವಿದ್ಯಾಪೀಠವಾಗಿತ್ತು ಎಂದು ಶಿಷ್ಯರು ಹೇಳುತ್ತಿರುವುದು ಇಂದಿಗೂ ತಿಳಿದುಬರುತ್ತಿದೆ. ಮಠಕ್ಕೆ ಸಾಕಷ್ಟು ಆಸ್ತಿಯಿದ್ದು, ಅದು ಕಾಲ ಗರ್ಭದಲ್ಲಿ ಕರಗಿ ಶಿಷ್ಯರ ಅನುಭವದಲ್ಲಿರುತ್ತದೆ. ಮಠವು ಸ್ಮಾರಕವಾಗಿ ನಿಂತಿರುತ್ತದೆ. ಈ ಮಠವು ಕುಣಿಗಲ್ ತಾಲ್ಲೋಕಿಗೆ ಸೇರಿರುತ್ತದೆ.

## ೪. ವಿರುಪಸಂದ್ರ ಗವೀಮಠ

ಶ್ರೀ ಮಠವು ಅಂಕನಹಳ್ಳಿ ಗವೀಮಠಕ್ಕೆ ಸುಮಾರು ಮೂರು ಮೈಲಿ ದೂರದಲ್ಲಿರುತ್ತದೆ. ಇದು ಬೆಂಗಳೂರು ಜಿಲ್ಲೆಯ ರಾಮನಗರ ತಾಲ್ಲೋಕಿಗೆ ಸೇರಿರುತ್ತದೆ. ಶ್ರೀ ಫಿರಂಗೀಶ್ವರರು ಅನೇಕ ಧರ್ಮ ಸಮ್ಮೇಳನಗಳನ್ನು ನಡೆಸಿ, ಈ ಪೀಠವನ್ನು ನಾಡಿಗೆ ಜ್ಞಾನಪೀಠವನ್ನಾಗಿ ಮಾಡಿದ್ದರು. ಸಂಪೂರ್ಣ ಮಠ ಶಿಥಿಲವಾಗಿದೆ. ಮಠದ ಸ್ಥಳದಲ್ಲಿ ಬಸವೇಶ್ವರನ ಪ್ರತಿಷ್ಠಾಪನೆಮಾಡಿ, ಮಠವನ್ನೇ ದೇವಸ್ಥಾನವನ್ನಾಗಿ ಮಾಡಲಾಗಿದೆ. ನಿತ್ಯ ಪೂಜೆ ನಡೆಯುತ್ತಿದೆ.

ಶ್ರೀ ಗುರುಗಳ ತಪೋಭೂಮಿಯಾಗಿದ್ದ ಮಠವನ್ನು ಜನರು ಭಕ್ತಿ ಶ್ರದ್ಧೆಗಳಿಂದ ನೋಡಿಕೊಳ್ಳುತ್ತಾರೆ. ಈಗಲೂ ಪ್ರತಿವರ್ಷ ವಿಶೇಷ ಜಾತ್ರೆ ಉತ್ಸವಗಳಲ್ಲಿ 'ಶ್ರೀ ಗುರುವನ್ನು ಸ್ಮರಿಸಿ' ಹಾಲಿ ಅಂಕನಹಳ್ಳಿ ಮಠಾಧ್ಯಕ್ಷರಾಗಿರುವ ಪೂಜ್ಯ ಶ್ರೀ ಸಿದ್ಧಲಿಂಗಶಿವಾಚಾರ್ಯ ಸ್ವಾಮಿಗಳವರನ್ನು ಭಕ್ತಿ

ಯಿಂದ ಆಹ್ವಾನಿಸಿ ಪೂಜಿಸಿ ತಮ್ಮ ಗೌರವವನ್ನು ಸಲ್ಲಿಸಿ ಆಶೀರ್ವಾದ ಪಡೆಯುವ ಸಂಪ್ರದಾಯ ಮಾತ್ರ ನಡೆದುಕೊಂಡು ಬರುತ್ತಿದೆ. ಮಠದ ಅರವತ್ತು ಎಕರೆ ಫಲವತ್ತಾದ ಭೂಮಿ ಕಾಲಕ್ರಮೇಣ ಗ್ರಾಮದ ಜನರ ಅನುಭವದಲ್ಲಿರುತ್ತದೆ.

ಈ ಪವಿತ್ರ ಸ್ಥಳವನ್ನು ಗ್ರಾಮಸ್ಥರು ಪರಮ ಪೂಜ್ಯರಾದ ಶ್ರೀ ಫಿರಂಗೀಶ್ವರರ ಅನುಷ್ಠಾನಮಾಡಿದ ಸ್ಥಳವೆಂದು ತಿಳಿದು ಪ್ರತಿವರ್ಷ ಆರಾಧನೆ ಮಾಡಿ ಅನೇಕ ಜನರಿಗೆ ಅನ್ನದಾನ ಮಾಡಿ, ಶ್ರೀ ಗುರುವನ್ನು ಸ್ಮರಿಸಿ ತಮ ಸೇವೆ ಸಲ್ಲಿಸುತ್ತಾರೆ.

ಆಶ್ರಮಿ ಧ್ಯಾನ ನಿಷ್ಠಶ್ಚ ಮಂತ್ರ ತತ್ವ ವಿಚಕ್ಷಣಃ ।
ನಿಗ್ರಹಾನುಗ್ರಹೇ ಶಕ್ತೋ ಗುರುರಿತ್ಯಭಿದೀಯತೇ ॥

ಹೀಗೆ ಗವೀಮಠದ ಶ್ರೀಗಳವರು ತಮ್ಮ ಅಂತರಿಂದ್ರಿಯಗಳನ್ನು ನಿಲ್ಲಿಸಿ ಸಿದ್ಧಪುರುಷರಾಗಿ, ಮಂತ್ರ, ತತ್ವ ಪಾರಂಗತರಾಗಿ ಲೋಕ ಭಯಂಕರವಾದ ದುಷ್ಟಾರಿಷ್ಟಗಳನ್ನು ನಿಗ್ರಹಿಸುವರಾಗಿ, ಕಷ್ಟಕಾರ್ಪಣ್ಯಗಳಿಂದ ಕಂಗೆಟ್ಟ ಶಿಷ್ಯರನ್ನು ತಮ್ಮ ತಪೋಬಲದಿಂದ ಅನುಗ್ರಹಿಸಿ ಸದ್ಗುರುಗಳಾಗಿ ಅಮರ ಕೀರ್ತಿಯನ್ನು ಪಡೆದಿರುತ್ತಾರೆ.

## ಶಿವಕ್ಷೇತ್ರ ಅಂಕನಹಳ್ಳಿ ಶ್ರೀ ಗವೀಮಠ

ಕರ್ನಾಟಕ ರಾಜ್ಯದಲ್ಲಿ ಅನೇಕ ಪುಣ್ಯ ಕ್ಷೇತ್ರಗಳಿವೆ. ಅವುಗಳಲ್ಲಿ ಕುಣಿಗಲ್ ತಾಲ್ಲೂಕು ಹುಲಿಯೂರುದುರ್ಗದ ಹೋಬಳಿಯ ಅಂಕನಹಳ್ಳಿ ಶ್ರೀಗವಿಮಠವು ಮಹಿಮಾನ್ವಿತರ ತಪೋಭೂಮಿ ಎಂದು ಲೋಕಪ್ರಸಿದ್ಧವಾಗಿದೆ. ಈ ತಪೋಭೂಮಿಯು ಅನೇಕ ಬಗೆಯ ಫಲವೃಕ್ಷಗಳಿಂದಲೂ, ಬಿಲ್ವ, ಶ್ರೀಗಂಧ, ಅರಳಿ, ಆಲ, ತೆಂಗು ಮುಂತಾದ ಪವಿತ್ರ ಗಿಡಮರಗಳಿಂದಲೂ, ಕೆರೆ, ಸುತ್ತುವರಿದ ತೊರೆ, ಭಾವಿಗಳಿಂದ ಕೂಡಿ ರಮ್ಯವಾದ ಆಶ್ರಮವಾಗಿ ಶಿವೋಪಾಸಕರ ಸಿದ್ಧಿಯ ಕ್ಷೇತ್ರವಾಗಿರುತ್ತದೆ. ಅಲ್ಲದೆ ವಂಶ ಪಾರಂಪರ್ಯವಾಗಿ ಶ್ರೀ ಬಾಳೇಹೊನ್ನೂರು ಮಹಾಪೀಠದ ಶಾಖಾಮಠವಾಗಿ ಆದರ್ಶವಾಗಿದೆ. ಪೂಜ್ಯ ಆಚಾರ್ಯರು, ಗುರು ಚರಮೂರ್ತಿಗಳು, ಶಿವಶರಣರು

ಬಂದು ತಪವನ್ನಾಚರಿಸಿದ ಪವಿತ್ರ ಪೀಠವಾಗಿರುತ್ತದೆ. ಗವಿಮಠದ ತಪೋಧನರಾದ ಶ್ರೀ ಫಿರಂಗೀಶ್ವರರ ತಪಸ್ಸಿನ ಪ್ರಭಾವದಿಂದ ಚೇತನಗೊಂಡ ಪವಿತ್ರ ಶಿವಕ್ಷೇತ್ರವಾಗಿದೆ.

ಶಿವಜ್ಞಾನದ ಜ್ಯೋತಿ ಸ್ವರೂಪರಾದ ಶ್ರೀಗುರು ಫಿರಂಗೀಶ್ವರರು ಶ್ರೀಮಠದಲ್ಲಿ ಅನುಷ್ಠಾನ ಮಾಡುತ್ತಿರುವಾಗ ಒಮ್ಮೆ ಪೂಜೆ, ಶಿವಸ್ತೋತ್ರಗಳನ್ನು ಮುಗಿಸಿಕೊಂಡು ಹೊರಬಂದು ಸಂಧ್ಯಾಕಾಲದ ಪ್ರಶಾಂತ ವಾತಾವರಣದಲ್ಲಿ ಒಂದು ಬಂಡೆಯ ಮೇಲೆ ಕುಳಿತು ಪ್ರಕೃತಿ ಸೌಂದರ್ಯವನ್ನು ನೋಡಿ ಆನಂದಮಗ್ನರಾಗಿರಲು ಸುತ್ತಮುತ್ತಣ ಗ್ರಾಮದ ಬಾಲಕರು ದನಕರುಗಳನ್ನು ಮೇಯಿಸಲು ಶ್ರೀಕ್ಷೇತ್ರಕ್ಕೆ ಬಂದು ಸಾಯಂಕಾಲವಾಗಲು ಅವರುಗಳು ಅದೇ ಮಾರ್ಗವಾಗಿ ದನಕರುಗಳನ್ನು ಹೊಡೆದುಕೊಂಡು ತಮ್ಮ ತಮ್ಮ ಗ್ರಾಮಗಳಿಗೆ ಹೋಗುತ್ತಿರುವಾಗ, ಅನಿರೀಕ್ಷಿತವಾಗಿ ತೇಜಸ್ಸಿನಿಂದ ಕೂಡಿದ ಶ್ರೀಗಳವರು ಬಂಡೆಯ ಮೇಲೆ ಕುಳಿತಿರುವುದನ್ನು ನೋಡಿ ಆನಂದಗೊಂಡ ಬಾಲಕರು ನಾವುಗಳು ಅನೇಕ ದಿನಗಳಿಂದ ಈ ಕ್ಷೇತ್ರದಲ್ಲಿ ದನಗಳನ್ನು ಮೇಯಿಸಲು ಬರುತ್ತಿದ್ದೇವೆ. ಒಂದು ದಿನವೂ ಹೊರಗಡೆ ಈ ಪೂಜ್ಯರನ್ನು ನೋಡಿರಲಿಲ್ಲ. "ನೋಡಿದಾಗಿನಿಂದ ಹೋಗಿ ದರ್ಶನ ಪಡೆಯುವ ಬಯಕೆ ಹೆಚ್ಚಾಗುತ್ತಿದೆ, ನಡೆಯಿರಿ ಎಲ್ಲರೂ ಹೋಗಿ ದರ್ಶನ ಮಾಡೋಣ" ಎಂದು ಮಾತನಾಡಿಕೊಂಡು ಶ್ರೀಗಳು ಕುಳಿತಿದ್ದ ಬಂಡೆಯ ಬಳಿಗೆ ಬಂದು ಭಕ್ತಿಯಿಂದ ಗುರುಚರಣಗಳಿಗೆ ನಮಸ್ಕರಿಸಿ ಕೈ ಮುಗಿದು ನಿಂತರು.

ತಪೋ ನಿಧಿಗಳು ಕೈ ಮುಗಿದು ನಿಂತ ಹುಡುಗರನ್ನು ನೋಡಿ ಶಿಷ್ಯ ವಾತ್ಸಲ್ಯದಿಂದ "ಹಲವು ವರ್ಣದ ಪದಾರ್ಥವೆಲ್ಲವ ತಂದು ಶಿವಲಿಂಗಾರ್ಪಣವ ಮಾಡಲು, ಆ ಪದಾರ್ಥದ ಪೂರ್ವಾಶ್ರಯವಳಿದು ಪ್ರಸಾದವಪ್ಪುದು ತಪ್ಪದು ನೋಡಾ ! ಆತನು ಶುದ್ಧ ನಿರ್ಮಲನು ನೋಡಾ ! ಮಹಾಲಿಂಗ ಗುರುಸಿದ್ಧೇಶ್ವರ ಪ್ರಭುವೆ" ಅನೇಕ ಪದಾರ್ಥಗಳನ್ನು ತಂದು ಶಿವಲಿಂಗಕ್ಕೆ ಅರ್ಪಿಸಿದಾಗ ಅವೆಲ್ಲ ಪದಾರ್ಥಗಳೂ ತಮ್ಮ ಪೂರ್ವಾಶ್ರಯವನ್ನೇ ಕಳೆದುಕೊಂಡು ಪ್ರಸಾದವಾದುವು. ಆ ಪ್ರಸಾದವನ್ನು ಸೇವಿಸುವವನು ಪ್ರಸಾದಕಾಯ ಪವಿತ್ರಕಾಯನಾಗುವನು. ಎಂಬ ಸಿದ್ಧಲಿಂಗೇಶ್ವರರ ವಚನದಂತೆ ಶ್ರೀಗಳು

ಬಂಡೆಯ ಮೇಲಿದ್ದ ಕಲ್ಲು ಚೂರುಗಳನ್ನು ತೆಗೆದು ಶಿವಲಿಂಗಕ್ಕೆ ಅರ್ಪಿಸಿ ಆ ಬಾಲಕರಿಗೆ ಕೊಡಲು ಆ ಕಲ್ಲು ಚೂರುಗಳು ಪೂರ್ವಾಶ್ರಯವನ್ನಳಿದು, ಕಲ್ಲು ಸಕ್ಕರೆಯಂತೆ ಕಾಣಲು, ಅವರುಗಳು ಪರಮಾಶ್ಚರ್ಯಗೊಂಡು ತಿಂದು ರುಚಿ ನೋಡಲು ಕಲ್ಲು ಸಕ್ಕರೆಯ ಸವಿಯಿರಲು ಬಾಲಕರು ಭಕ್ತಿಯಿಂದ ಶ್ರೀಗಳ ಚರಣಗಳಿಗೆ ಶಿರಸಾಷ್ಟಾಂಗ ನಮಸ್ಕಾರಗಳನ್ನು ಮಾಡಿ ತಾವು ನಿಜವಾಗಿಯೂ ಸಿದ್ಧಪುರುಷರೆಂದು ಸ್ತೋತ್ರ ಮಾಡಿದರು.

ಭಕ್ತರ ಕಲ್ಪವೃಕ್ಷವಾದ ಗುರುವು ಹುಡುಗರ ಶ್ರದ್ಧಾಭಕ್ತಿಯನ್ನು ಕಂಡು ಸಂತೋಷಪಟ್ಟು ಸಂಧ್ಯಾಕಾಲವಾಗಿದೆ. ನಿಮ್ಮ ಗ್ರಾಮಗಳಿಗೆ ಹೋಗಿ ನಾಳೆಯಿಂದ ಬರುವಾಗ ನೀವುಗಳು ಪ್ರತಿಯೊಬ್ಬರು ಒಂದೊಂದು ದಿವಸ ಅನುಷ್ಠಾನಕ್ಕೆ ಹಾಲನ್ನು ತೆಗೆದುಕೊಂಡು ಬನ್ನಿ, ಅದರಿಂದ ನಿಮಗೆ ಒಳ್ಳೆಯ ಫಲ ದೊರೆಯುತ್ತದೆ ಎಂದು ಅಪ್ಪಣೆ ಕೊಡಿಸಿ ಕಳುಹಿಸಿಕೊಟ್ಟರು.

ಆ ಬಾಲಕರು ತಮ್ಮ ತಮ್ಮ ಗ್ರಾಮಗಳಾದ ನೀಲಸಂದ್ರ, ಏರೋಹಳ್ಳಿ, ಚಿಕ್ಕಾನಹಳ್ಳಿ, ಅಂಕನಹಳ್ಳಿ, (ಈಗ ಶ್ರೀ ಗವಿಮಠಮಾತ್ರವಿದೆ) ಬೇಡರಹಳ್ಳಿ, ಕೆಂಪನಹಳ್ಳಿ, ತಾವರೆಕೆರೆ ಮುಂತಾದ ಗ್ರಾಮಗಳಿಗೆ ಹೋಗಿ ನಡೆದ ಸಂಗತಿಯನ್ನು ಗ್ರಾಮದ ಹಿರಿಯರಿಗೆ ತಿಳಿಸಿದರು. ಅವರಾದರೋ 'ಕಲ್ಲು ಸಕ್ಕರೆಯಾದ' ವಿಷಯ ಕೇಳಿ ಪರಮಾಶ್ಚರ್ಯಗೊಂಡು ತಾವುಗಳು ಹೋಗಿ ಶ್ರೀಗುರುವಿನ ದರ್ಶನ ಮಾಡಬೇಕೆಂಬ ಮನಸ್ಸುಳ್ಳವರಾದರು.

## ಶ್ರೀಗಳು ಅಂಟುರೋಗ ನಿವಾರಣೆ ಮಾಡಿದರು

ಆ ಪ್ರದೇಶವು ಕ್ಷಾಮಡಾಮರಗಳಿಗೆ ತುತ್ತಾಗಿ, ಜನರು ಕಾಲರಾದಿಂದಲೂ, ದನಕರುಗಳು ಚಪ್ಪೆರೋಗದಿಂದಲೂ ಪ್ರತಿದಿವಸ ಆ ಹಳ್ಳಿಗಳಲ್ಲಿ ಹತ್ತಾರು ದನಕರುಗಳು, ಜನರು ಸಾಯುತ್ತಿರಲು, ಜನರು ಕಂಗೆಟ್ಟು ಬಳಲಿ ಚಿಂತಾಕ್ರಾಂತರಾಗಿ ದಿಕ್ಕು ತಿಳಿಯದವರಾಗಿದ್ದರು. ಬಾಲಕರು ಬಂದು ಶ್ರೀಗಳವರ ಪ್ರಭಾವವನ್ನು ಹೇಳಿದ ಕೂಡಲೆ ಜನರು ತಮ್ಮ ಗ್ರಾಮಗಳಿಗೆ ಒದಗಿರುವ ಈ ಅಂಟುರೋಗವನ್ನು ಶ್ರೀಗಳು ನಿವಾರಣೆ ಮಾಡಬಲ್ಲರೆ? ಎಂಬ ಆಕಾಂಕ್ಷೆ ಮಾಡಿ ಚಿಕ್ಕಾನಹಳ್ಳಿ, ಏರೋಹಳ್ಳಿ, ನೀಲಸಂದ್ರ ಮುಂತಾದ ಗ್ರಾಮಸ್ಥರೂ ಕೂಡಿ ಮಾತನಾಡಿಕೊಂಡು ನಾಳೆ ಶ್ರಾವಣ

ಸೋಮವಾರವಾಗಿದೆ; ಪೂಜ್ಯ ಶಿವಯೋಗಿಗಳ ದರ್ಶನಕ್ಕೆ ಪ್ರಶಸ್ತವಾಗಿದೆ ಎಂದು ನಿಶ್ಚಯಿಸಿಕೊಂಡು 'ತಮ್ಮ ಗ್ರಾಮಗಳಿಗೆ ಒದಗಿರುವ ಕಷ್ಟವನ್ನು ನಿವೇದನೆ ಮಾಡಿಕೊಳ್ಳಬೇಕೆಂದು ಯೋಚಿಸಿದರು.

'ಶಿವ ಮುನಿದರೆ ಗುರು ಕಾಯುವ' ಎಂಬ ಶಿವಶರಣರ ನುಡಿಯಂತೆ ಗುರುವಿನಲ್ಲಿ ನಂಬಿಕೆಯುಳ್ಳವರಾಗಿ ಗ್ರಾಮಸ್ಥರು ಮರುದಿವಸ ಪೂಜಾದ್ರವ್ಯ ಗಳನ್ನು, ಕ್ಷೀರವನ್ನು ತೆಗೆದುಕೊಂಡು ಅಂಕನಹಳ್ಳಿ ಶ್ರೀ ಗವೀಮಠಕ್ಕೆ ಬಂದು ಶ್ರೀ ಗುರುವಿನ ಧ್ಯಾನಮಾಡಿದರು. ಧ್ಯಾನಮಗ್ನರಾಗಿದ್ದ ಶ್ರೀ ಫಿರಂಗೀ ಶ್ವರರು ಜನರ ಶಬ್ದ ಕೇಳಿ ಬಹಿರ್ಮುಖರಾಗಲು, ಬಂದಿದ್ದ ಭಕ್ತಸ್ತೋಮವು ಶ್ರೀಗಳ ಚರಣಾರವಿಂದಗಳಿಗೆ ನಮಸ್ಕರಿಸಿ ತಂದಿದ್ದ ಶಿವಪೂಜಾ ಸಾಮಗ್ರಿ ಗಳನ್ನು ಅರ್ಪಿಸಿ ಕೈಜೋಡಿಸಿ "ಹರಣಂ ಭವರೋಗಸ್ಯ ತರಣಂ ಕ್ಲೇಶವಾರಿಧೇ| ಭರಣಂ ಸರ್ವಲೋಕಸ್ಯ ಶರಣಂ ಚರಣಂ ಗುರೋಃ" ಸಾಕ್ಷಾತ್ ಶಿವನೇ ಮನುಷ್ಯ ರೂಪವನ್ನು ಹೊಂದಿ ಗುರು ರೂಪದಿಂದ ಭೂಮಿಯಲ್ಲಿ ಸಂಚರಿಸುತ್ತಾ ಭವಪೀಡಿತರಾದ ಶಿಷ್ಯರ ಭವರೋಗವನ್ನು ಪರಿಹರಿಸಿ, ದುಃಖ ಸಾಗರವನ್ನು ದಾಟಿಸುವ, ಲೋಕವನ್ನು ಉದ್ಧಾರ ಮಾಡುವ ಸದ್ಗುರುವಿನ ಚರಣವೇ ನಮ್ಮ ಕಷ್ಟಗಳನ್ನು ಪರಿಹರಿಸೆಂದು ಪ್ರಾರ್ಥಿಸಿದರು.

ಸದ್ಗುರುವು ಭಕ್ತರ ಪ್ರಾರ್ಥನೆಯನ್ನು ಮನವರಿತು ನೀವುಗಳು ನಮ್ಮ ದರ್ಶನಕ್ಕೆ ಬಂದುದನ್ನು ನೋಡಿ ನಮಗೆ ಆನಂದವಾಗಿದೆ. ಈಗ ನಿಮ್ಮ ಗಳಿಗೆ ಆಗಿರುವ ತೊಂದರೆಗಳನ್ನು ನಿವೇದನೆ ಮಾಡಿ ಎಂದು ಅಪ್ಪಣೆ ಮಾಡಿ ದರು. ಆಗ ಭಕ್ತಾದಿಗಳು 'ಸಾಕ್ಷಾತ್ ಮೃತ್ಯುಂಜಯನಂತೆ ಕಾಣುತ್ತಿ ರುವ ಶ್ರೀ ಗುರುವೆ' ಈ ಸುತ್ತಮುತ್ತಲಿರುವ ನಮ್ಮ ಗ್ರಾಮಗಳಲ್ಲಿ ಕಾಲರ, (ವಿಶೂಚಿಕ) ಚಪ್ಪೆರೋಗಗಳು ತಲೆದೋರಿ ಪ್ರತಿನಿತ್ಯವೂ ಹತ್ತಾರು ಜನರು, ದನಕರುಗಳು ಸಾಯುತ್ತಿವೆ. 'ಶಿವನು ನಮಗೆ ಈ ಕಷ್ಟವನ್ನು ಇತ್ತು ಪರೀಕ್ಷಿಸುತ್ತಿದ್ದಾನೆ' ಶಿವಸ್ವರೂಪಿಗಳಾದ ತಾವು ಈ ಕಷ್ಟಗಳಿಂದ ಪಾರು ಮಾಡಿ ನಮ್ಮನ್ನು ರಕ್ಷಿಸಬೇಕೆಂದು ಬೇಡಿಕೊಂಡರು.

ಕರುಣಾಮೂರ್ತಿಗಳು ಆದ ಯೋಗೀಶ್ವರರು ಎಲೈ ಮಹಾಜನರೇ! ನೀವುಗಳು ಬಂದು ನಮ್ಮನ್ನು ಮರೆಹೊಕ್ಕಿದ್ದರಿಂದ ನಿಮ್ಮ ಕಷ್ಟಗಳನ್ನು ಶಿವನು ನಿವಾರಣೆ ಮಾಡುತ್ತಾನೆ; ಭಯಪಡಬೇಡಿ. ನೀವುಗಳಾದರೋ ಒಮ್ಮೆ

ಗುರುವಿನ ಚರಣದಲ್ಲಿ ಶರಣಾದ ಬಳಿಕ ನೀವುಗಳು ಬದುಕಿರುವ ತನಕ ಆ ಗುರುವಿನಲ್ಲಿ ಶ್ರದ್ಧೆ ಭಕ್ತಿಯುಳ್ಳವರಾಗಿರಬೇಕು. ಮನಸ್ಸಿನಲ್ಲಿಯೂ, ಮಾತಿನಲ್ಲಿಯೂ, ನಡತೆಯಲ್ಲಿಯೂ ಗುರುವನ್ನು ತಾತ್ಸಾರ ಮಾಡಬಾರದು. "ಅಪ್ರಿಯಸ್ಯಚ ಹಾಸ್ಯಸ್ಯ ನಾವ ಕಾಶೋ ಗುರ್ಹೋಃಪುರಃ| ನನಿಯೋಗ ಪರಂಬ್ರೂಯಾತ್ ಗುರೋ ರಾಜ್ಞಾಂ ವಿಭಾವಯೇತ್"|| ಗುರುವಿನ ಎದುರಿಗೆ ಅಪ್ರಿಯವಾದುದನ್ನು ಆಡಬಾರದು, ಹಾಸ್ಯವಾಗಿ ಮಾತನಾಡಬಾರದು, ಅಧಿಕಾರವಾಣಿಯಿಂದ ಹೇಳಬಾರದು, ಸದಾ ಗುರುವಿನ ಆಜ್ಞೆಯನ್ನೇ ನಿರೀಕ್ಷಿಸುತ್ತಿರಬೇಕು, ಒಮ್ಮೆ ಶಿವನೇ ಪಾರ್ವತಿಗೆ ಈ ರೀತಿ ನಿರೂಪಿಸಿರುತ್ತಾನೆ:

ಮುನಿಭ್ಯಃ ಪನ್ನಗೇಭ್ಯಶ್ಚ ಸುರೇಭ್ಯಃ ಶಾಪತೋಽಪಿಚ ।
ಕಾಲ ಮೃತ್ಯುಭಯಾದ್ವಾಪಿ ಗುರೂರಕ್ಷತಿ ಪಾರ್ವತಿ ॥

ಮುನಿಗಳ, ಸರ್ಪಗಳ, ದೇವತೆಗಳ, ಶಾಪಗಳಿಂದಲೂ ಹೆಚ್ಚೇಕೆ? ಕಾಲಮೃತ್ಯುವಿನ ಭಯದಿಂದಲೂ ಸಹ ಗುರುವು ತನ್ನ ಶಿಷ್ಯರನ್ನು ರಕ್ಷಿಸುತ್ತಾನೆ ಎಂಬುದಾಗಿ ಹೇಳಿರುವುದರಿಂದ ನೀವುಗಳು ಮೊದಲು ಗುರುವಿನಲ್ಲಿ ಭಕ್ತಿಯುಳ್ಳವರಾಗಿರಬೇಕು ಎಂದು ನುಡಿದರು. ಆಗ ಭಕ್ತರೆಲ್ಲರೂ ಸದ್ಗುರುವೆ, ಮಹಾಮಹಿಮರಾದ ತಮ್ಮಲ್ಲಿ ಶ್ರದ್ಧಾಭಕ್ತಿಯಿಂದ ನಡೆದುಕೊಳ್ಳುತ್ತೇವೆ ಎಂದರು.

ಆಗ ಶ್ರೀಗಳು ವಿಭೂತಿಯನ್ನೂ, ತೀರ್ಥವನ್ನೂ ಮಂತ್ರಿಸಿಕೊಟ್ಟು, ಕಾಲರ ಪೀಡಿತರಿಗೆ, ವಿಭೂತಿ ಲೇಪನ ಮಾಡಿ ತೀರ್ಥವನ್ನು ಸೇವನ ಮಾಡಿದರೆ ನಿವಾರಣೆಯಾಗುತ್ತದೆ. ಚಪ್ಪೆರೋಗ ಪೀಡಿತವಾಗಿರುವ ದನಕರುಗಳಿಗೆ, ವಿಭೂತಿ, ಬಿಲ್ವ, ಔಷಧಿ, ಧೂಪ ತೀರ್ಥವನ್ನು ಮಂತ್ರಿಸಿಕೊಟ್ಟು, ಬಿಲ್ವವನ್ನು ಕುಟ್ಟಿ ಪುಡಿಮಾಡಿ, ಹಸಿರು ಔಷಧಿ*ಯನ್ನೂ ಭಸ್ಮದೊಡನೆ ಮಿಶ್ರಣಮಾಡಿ, ತೀರ್ಥದಲ್ಲಿ ಕುಡಿಸಿರಿ. ಧೂಪವನ್ನು ಬೆಳಗ್ಗೆ, ಸಾಯಂಕಾಲ ಗೋಶಾಲೆಗಳಲ್ಲಿ, ಶಿವಸ್ಮರಣೆ ಮಾಡುತ್ತ ಹಾಕಿದರೆ, ರೋಗವು ನಿವಾರಣೆ

---

* ಔಷಧಿ ಒಂದು ಲತಾ ವಿಶೇಷ.

ವಾಗುತ್ತದೆ ಎಂದು ಅಪ್ಪಣೆ ಕೊಡಿಸಿ ಆಶೀರ್ವದಿಸಿ, ಅವರುಗಳನ್ನು ಕಳುಹಿಸಿಕೊಟ್ಟರು.

ಶ್ರೀ ಗುರು ವಚನದಂತೆ ಭಕ್ತರೆಲ್ಲರೂ ತಮ್ಮ ತಮ್ಮ ಗ್ರಾಮಗಳಿಗೆ ಬಂದು, ಕಾಲರ ಪೀಡಿತರಿಗೂ, ಚಪ್ಪೆರೋಗ ಪೀಡಿತವಾದ ಗೋವುಗಳಿಗೂ ಪ್ರಸಾದ ಸೇವನೆ ಮಾಡಲು ಒಂದು ವಾರದೊಳಗಾಗಿ ಸಂಪೂರ್ಣ ನಿವಾರಣೆಯಾಗಲು ಸುತ್ತಮುತ್ತಲ ಗ್ರಾಮಗಳ ಭಕ್ತಾದಿಗಳಿಗೆ ಆನಂದವಾಗಿ ಭವರೋಗ ವೈದ್ಯನು ಶ್ರೀ ಗುರುವು ಎಂದು ಹೊಗಳಿ, ಎಲ್ಲಾ ಕಡೆ ಶ್ರೀ ಗುರುವಿನ ಪವಾಡವನ್ನು ಪ್ರಚಾರ ಪಡಿಸಿದರು. ವಿಷಯ ತಿಳಿದ ಕೂಡಲೆ ಆ ನಾಡಿನ ಪ್ರತಿಯೊಂದು ಗ್ರಾಮಸ್ಥರೂ ತಂಡ ತಂಡವಾಗಿ ಅಂಕನಹಳ್ಳಿ ಶ್ರೀ ಗವೀಮಠಕ್ಕೆ ಫಲಪುಷ್ಪ ಸಹಿತ ಬಂದು ಶ್ರೀ ಗುರು ಫಿರಂಗೀಶ್ವರರನ್ನು ದರ್ಶನಮಾಡಿ ತಮ್ಮ ತಮ್ಮ ತೊಂದರೆಗಳನ್ನು ವಿಜ್ಞಾಪನೆ ಮಾಡಿಕೊಂಡು ನಿವಾರಣೆ ಮಾಡಿಕೊಳ್ಳಲು ಪ್ರಾರಂಭಿಸಿದರು. ಶ್ರೀ ಗುರುವು ಆ ನಾಡಿನ ಭಕ್ತರ ರಕ್ಷಕರೆಂದು ಪ್ರಸಿದ್ಧಿ ಪಡೆದರು.

ಪೂಜ್ಯರ ಅಮೃತ ಹಸ್ತದಿಂದ ತಮ್ಮ ಸಂಕಷ್ಟಗಳು ನಿವಾರಣೆಯಾಗಲು ಸುತ್ತಮುತ್ತಣ ಗ್ರಾಮದ ಭಕ್ತರೆಲ್ಲರೂ ಶ್ರೀ ಗುರುವಿನ ಚರಣದಲ್ಲಿ ಶ್ರದ್ಧಾ ಭಕ್ತಿಯುಳ್ಳವರಾಗಿ, ಎಲ್ಲರೂ ಕೂಡಿ ಶ್ರೀ ಗುರುವಿನ ಸನ್ನಿಧಿಗೆ ಬಂದು 'ಭಕ್ತರೋದ್ಧಾರಕರಾದ ಶ್ರೀ ಗುರುವೆ ತಮ್ಮ ತಪೋಬಲದಿಂದ ನಮ್ಮ ಗ್ರಾಮಗಳಿಗೆ ಒದಗಿದ್ದ ಅಂಟುರೋಗಗಳು ನಿವಾರಣೆಯಾದವು! ನಾವು ಈಗ ತಮ್ಮ ಸೇವೆಯನ್ನು ಮನಸಾರೆ ಮಾಡಲು ಬಂದು ನಿಂತಿರುತ್ತೇವೆ. ನಮ್ಮಗಳ ಮೇಲೆ ಕೃಪೆ ಇಟ್ಟು ತಮ್ಮ ಸೇವಾ ಭಾಗ್ಯವನ್ನು ಕರುಣಿಸಬೇಕೆಂದು ವಿನಯದಿಂದ ಅರಿಕೆ ಮಾಡಿಕೊಂಡರು.

ಶಿಷ್ಯರ ಅಜ್ಞಾನವನ್ನು ಹೋಗಲಾಡಿಸಿ, ದಿವ್ಯಜ್ಞಾನದ ಅಮರ ಮಾರ್ಗವನ್ನು ತೋರಿಸಬೇಕಾದ್ದು ಗುರುವಿನ ಹೊಣೆಯಾದ್ದರಿಂದ ಪರಶಿವ ಸ್ವರೂಪಿಗಳಾದ ಶಿವಯೋಗಿಗಳು 'ಗುರು ವಚನೋಪದೇಶವನಾಲಿಸಿದಾಗಳ ಹುದು ನರರಿಗೆ ಮುಕುತಿ' ಎಂದು ನಿಜಗುಣರು ಅಪ್ಪಣೆ ಕೊಡಿಸಿರುವುದರಿಂದ ಆ ಪ್ರಕಾರ ನಡೆಯುವುದು ನಮ್ಮ ಕರ್ತವ್ಯ, ಮತ್ತು ನಮ್ಮಗಳ ಗುರಿ ಏನೆಂಬುದನ್ನು ತಿಳಿಯಬೇಕು.

ಎಲ್ಲಾ ಪ್ರಾಣಿಗಳಿಗಿಂತ ಮಾನವ ಜನ್ಮವು ಅತ್ಯಂತ ಶ್ರೇಷ್ಠವಾದು ದೆಂದು ದಿವ್ಯಜ್ಞಾನಿಗಳಾದ ಶ್ರೀ ರೇಣುಕಾಚಾರ್ಯರೂ, ಋಷಿಗಳೂ, ಶಿವ ಶರಣರೂ, ಸಾಧಕರೂ, ತಪಸ್ವಿಗಳೂ ಹೇಳಿರುತ್ತಾರೆ. ಆದರೆ, ಕ್ಷುದ್ರ ಪ್ರಾಣಿಗಳ ಜೀವನವು ಸಾಮಾನ್ಯ ರೀತಿಯದು. ಅಲ್ಲಿ ಜ್ಞಾನದ ಅರಿವಿಲ್ಲ, ದೈಹಿಕ ಸುಖೇಚ್ಛೆಗಳು ಮಾತ್ರ ತೋರುತ್ತವೆ. ಅವೆಲ್ಲವೂ ಹುಟ್ಟು ಸಾವಿನ ಹೋರಾಟದೊಳಗೆ ಸುತ್ತುವ ಜಂತುಗಳು, – ತಮಗೆ ಸುತ್ತಿಕೊಂಡಿರುವ ಮಾಯಾ ಸಂಬಂಧವಾದ ಆ ಪಂಜರವನ್ನು ಬಿಡಿಸಿಕೊಳ್ಳುವ ಅಮೂಲ್ಯಶಕ್ತಿ ಜ್ಞಾನ ಮಾನವರಿಗೆ ಮಾತ್ರವಿದೆ. ಮಾನವನಾಗಿ ಕ್ಷುದ್ರ ಜಂತುಗಳಂತೆ ಬಾಳುವೆ ಮಾಡುವುದು ಕೇವಲ ಹೀನ ವರ್ತನೆ. ಹಿಂದೆ ನಾನಾ ಯೋನಿ ಗಳಲ್ಲಿ ಬಂದು ಬಳಲಿದ್ದೇ ಸಾಕು. ಆಯಾಯಾ ಜನ್ಮಗಳಲ್ಲಿ ಬಂದು ಅನು ಭವಿಸಿದ ಕಷ್ಟಗಳ ಮಧ್ಯೆ ಕಿಂಚಿತ್ ಗಳಿಸಿದ ಪೂರ್ವ ಪುಣ್ಯ ಫಲದಿಂದ ಅವು ಗಳಿಗಿಂತ ಮಿಗಿಲಾದ ಮಾನವ ಕುಲದಲ್ಲಿ ಹುಟ್ಟಿ ಬಂದುದಾಗಿದೆ. ಹಿಂದೆ ಅನುಭವಿಸಿದ ಕಷ್ಟಗಳು ವರ್ಣಿಸಲಾಗದಷ್ಟು ಇವೆ. ಈ ಬಗ್ಗೆ ಪೂಜ್ಯಸರ್ಪ ಭೂಷಣ ಶಿವಯೋಗಿಗಳು ತಮ್ಮ ಕೈವಲ್ಯ ಕಲ್ಪವಲ್ಲರಿಯಲ್ಲಿ "ಬರಬಾರದತಿ ಹೀನ ಯೋನಿಗಳೊಳು ಬಂದು, ಧರಿಸಬಾರದ ದೇಹವನ್ನೆ ತೊಟ್ಟು, ಸ್ಮರಿ ಸಲುಚಿತವಲ್ಲದಾಹಾರಗಳನುಂಡು ತಿರುಗುತಿರ್ಪುದು...." ಆಯಿತು ಈಗ ಲಾದರೂ ಆ ಕೆಟ್ಟ ದಾರಿಯನ್ನು ಬೇಡವೆನ್ನದಿದ್ದರೆ ಅದೆಂತಹ ಬಾಳುವೆ? ಏನಾದರೂ ಮಾಡಿ ಬಂದ ಕಷ್ಟದಿಂದ ಪಾರಾಗಬೇಕು. ಈ ಭವ ಬಂಧನ ದಿಂದ ಬಿಡಿಸಿಕೊಂಡು ಪಾರಾಗಬೇಕಾದುದೇ ಮಾನವ ಜನ್ಮದ ಗುರಿಯಾಗಿ ರುತ್ತದೆ. ಇದಕ್ಕಾಗಿಯೇ ಗುರು ಶಿಷ್ಯರ ಸಂಬಂಧ ನಮ್ಮ ಸಮಾಜದಲ್ಲಿ ಅನಂತ ಕಾಲದಿಂದ ಬಂದಿರುತ್ತದೆ. ಶಿಷ್ಯರ ಉದ್ಧಾರಕ್ಕಾಗಿಯೇ ಆಚಾರ್ಯರ ಪೀಠಗಳು, ಮಠಗಳು, ಋಷ್ಯಾಶ್ರಮಗಳು ಭಾರತದಾದ್ಯಂತ ನಿರ್ಮಾಣ ವಾದವು. ಆ ಮಠಾಧೀಶ್ವರರು ತಮ್ಮ ತಪಃಶಕ್ತಿಯನ್ನು ಶಿಷ್ಯರ ಕ್ಷೇಮಕ್ಕಾಗಿ ಧಾರೆ ಎರೆವ ಮಹಾತ್ಮರಾಗಿ ಹೋಗಿದ್ದಾರೆ ಎಂದು ಉಪದೇಶಿಸಿದರು.

ನೀವುಗಳು ಭಕ್ತಿಯಿಂದ ಗುರುಸೇವೆ ಮಾಡಲು ಮುಂದೆ ಬಂದಿರುವುದು ನೋಡಿದರೆ ನಮಗೆ ಶಿವದರ್ಶನವಾದಷ್ಟು ಹರ್ಷವಾಗಿರುತ್ತದೆ. ಈ ಬಗ್ಗೆ

ಸೇವೇತ ಪರಮಾಚಾರ್ಯಂ ಶಿಷ್ಯೋ ಭಕ್ತಿ ಭಯಾನ್ವಿತಃ ॥
ಷಣ್ಮಾಸಾತ್ ವತ್ಸರಂ ವಾಪಿ ಯಾವದೇವ ಪ್ರಸೀದತಿ॥

ಶಿಷ್ಯನು ಭಯ ಭಕ್ತಿಗಳಿಂದೊಡಗೂಡಿ ಆರು ತಿಂಗಳವರೆಗಾಗಲಿ, ಒಂದು ವರ್ಷದವರೆಗಾಗಲಿ ಗುರುವು ಪ್ರಸನ್ನವಾಗುವವರೆಗೆ ಆ ಪರಮ ಶಿವ ರೂಪ ಗುರುಮೂರ್ತಿಯನ್ನು ಸೇವಿಸಬೇಕೆಂದು (ಶಿವ ಸಿದ್ಧಾಂತ ಶಿಖಾಮಣಿಯಲ್ಲಿ 6 ಪ) ಶ್ರೀ ರೇಣುಕಾಚಾರ್ಯರು ನಿರೂಪಿಸಿರುವುದರಿಂದ ಅನೇಕ ಶಿಷ್ಯರು ಹಿಂದಿನಿಂದಲೂ ಶಿವಾಲಯ, ಗುರುಪೀಠ, ಋಷ್ಯಾಶ್ರಮ, ಪವಿತ್ರ ಕ್ಷೇತ್ರಗಳನ್ನು ಜೀರ್ಣೋದ್ಧಾರಮಾಡಿ ರಕ್ಷಿಸಿಕೊಂಡು ಬಂದು ಗುರುಪ್ರೀತಿಗೆ ಪಾತ್ರರಾಗಿರುತ್ತಾರೆ. ಪವಿತ್ರ ಭಾರತೀಯ ಪರಂಪರೆಯಲ್ಲಿ ಬಂದ ನೀವುಗಳು ನಿಮ್ಮ ಹೊಣೆಯನ್ನು ತಿಳಿದು ಗುರುಮಠಕ್ಕೆ ಬಂದಿರುತ್ತೀರೆಂದು ನಾವು ಭಾವಿಸುತ್ತೇವೆ.ಈ ಕ್ಷೇತ್ರದಲ್ಲಿರುವ ಹದಿನಾರು ಅಂಕಣ ಶ್ರೀಮಠವು ಶಿವಾಲಯವು ಶಿಥಿಲವಾಗಿರುವುದರಿಂದ ಅವುಗಳನ್ನು ಶ್ರಮಪಟ್ಟು ನೀವುಗಳು ಜೀರ್ಣೋದ್ಧಾರ ಮಾಡಿದರೆ ಇದರಿಂದ ಶಿವಕೃಪೆ ನಿಮಗುಂಟಾಗಿ ನಿಮ್ಮ ಇಷ್ಟಾರ್ಥಗಳು ಕೈಗೂಡುತ್ತವೆ ಎಂದರು.

## ಶ್ರೀಮಠದ ಜೀರ್ಣೋದ್ಧಾರ

ಸದ್ಗುರುವು ಅಪ್ಪಣೆ ಕೊಡಿಸಿದ ಕೂಡಲೆ ಎಲ್ಲಾ ಭಕ್ತರು ಅಮಿತಾನಂದಗೊಂಡು ಶ್ರೀಮಠದ ಕೆಲಸ ಕಾರ್ಯಗಳನ್ನು ಮಾಡಲು ಪ್ರಾರಂಭಿಸಿದರು. ಅಂಕನಹಳ್ಳಿ ಶ್ರೀ ಗವೀಮಠದ ಜೀರ್ಣೋದ್ಧಾರ ಕಾರ್ಯ ನಡೆಯುತ್ತದೆ ಎಂದು ತಿಳಿದಕೂಡಲೆ ಜನರು ಗುಂಪು ಗುಂಪಾಗಿ ಪ್ರತಿಹಳ್ಳಿಯಿಂದ ಬಂದರು. ಕೆಲವರು ಕಲ್ಲು ಕೆಲಸದವರನ್ನು, ಕೆಲವರು ಮರದ ಕೆಲಸದವರನ್ನು, ಕೆಲವರು ಗಾರೆ ಕೆಲಸದವರನ್ನು, ಕರೆತಂದರು. ಕೆಲವರು ತಾವಾಗಿಯೇ ಬಂದರು; ಹೀಗೆ ಜನರೆಲ್ಲ ಸೇರಿ ಮಠದ ಜೀರ್ಣೋದ್ಧಾರ ಪ್ರಾರಂಭ ಮಾಡಿದರು.

ಆದರೆ ಕಟ್ಟಡಕ್ಕೆ ನೀರು ದೊರೆಯುವುದು ಅಭಾವವಾಯಿತು. ಹಿರಿಯರು ಶ್ರೀಗಳಲ್ಲಿ ಬಂದು ಅರಿಕೆಮಾಡಿ ಸಮಾಲೋಚನೆ ನಡೆಸಿದರು.

ಪೂಜ್ಯರು ಸ್ವಲ್ಪ ಯೋಚಿಸಿ, ಎಲ್ಲರನ್ನೂ ತಮ್ಮ ಹಿಂದೆ ಒಂದು ಫರ್ಲಾಂಗ್ ದೂರ ಕರೆದುಕೊಂಡು ಹೋಗಿ ಒಂದು ಸ್ಥಳ ತೋರಿಸಿ, 'ಇಲ್ಲಿ ಅಗೆಯಿರಿ ನೀರು ಬರುತ್ತದೆ ಎಂದು ಹೇಳಿದರು' ಜನರು ಅಲ್ಲಿಯೇ ಸುಮಾರು ಐದು ಅಡಿ ಅಗೆಯಲು ಜಲವು ಸಾಕಷ್ಟು ಪ್ರಮಾಣದಲ್ಲಿ ಬರಲು ಶಿಷ್ಯರಿಗೆ ಹರ್ಷವಾಗಿ ಅದನ್ನೇ ಕಟ್ಟೆಯಾಕಾರ ಮಾಡಿದರು. ಗುರುಗಳ ಆ ಕಟ್ಟೆಗೆ 'ಒಡೆಯರ್ ಕಟ್ಟೆ' ಎಂದು ನಾಮಕರಣಮಾಡಿದರು. ಆ ಕಟ್ಟೆಯು ಈಗಲೂ ಇರುತ್ತದೆ. ಜಲವು ದೊರೆತಮೇಲೆ ಶ್ರೀಮಠದ ಕಾರ್ಯವು ಭರದಿಂದ ಸಾಗಿತು.

## ಶಿಶುವಿನ ಉದ್ಧಾರ

ನೂರಾರು ಜನರು ಸೇರಿ ಮಠದ ಜೀರ್ಣೋದ್ಧಾರ ಕಾರ್ಯ ಶರವೇಗದಲ್ಲಿ ನಡೆಯುತ್ತಿದೆ. ಜನರು ತಮ್ಮ ತಮ್ಮ ಕೆಲಸದಲ್ಲಿ ತೊಡಗಿದ್ದಾರೆ. ಮಣ್ಣಿನ ಕೆಲಸ ಮಾಡುತ್ತಿದ್ದ ಸಿದ್ಧರಾಮಯ್ಯನ ಮಗು ಮಠದ ಆವರಣದಲ್ಲಿ ಆಟವಾಡುತ್ತ, ಸಮೀಪದಲ್ಲೇ ಇದ್ದ ಕಲ್ಲು ಚೂರುಗಳನ್ನು ತೆಗೆದುಕೊಂಡು ಪಕ್ಕದ ಹುತ್ತಕ್ಕೆ ತುಂಬಲು ಒಳಗೆ ಇದ್ದ ಹಾವಿಗೆ ಏಟು ತಗುಲಿ ಕೋಪಗೊಂಡ ಹಾವು ಹೊರಬಂದು ಮಗುವನ್ನು ಕಚ್ಚಿ ಜನರು ನೋಡುತ್ತಿದ್ದಂತೆಯೇ ಎಲ್ಲಿಯೋ ಹೊರಟು ಹೋಯಿತು. ಮಗು ಭಯದಿಂದ ಹಾವು ಎಂದು ಕಿರಿಚಿಕೊಳ್ಳಲು, ಅಲ್ಲಿಯೇ ಕೆಲಸ ಮಾಡುತ್ತಿದ್ದ ಆತನ ತಂದೆ ಮತ್ತಿತರು ಓಡಿ ಬಂದು ನೋಡಲು ಮಗುವಿನ ಕೈಯ್ಯಲ್ಲಿ ಧಾರಾಕಾರವಾಗಿ ರಕ್ತ ಹರಿಯುತ್ತಿದೆ. ಮಗು ಒಂದೇ ಸಮನೆ ಅಳುತ್ತಿತ್ತು. ಅವರು ಗಾಬರಿಯಿಂದ ಅಲ್ಲಿಯೇ ಸ್ವಲ್ಪ ಮಗುವನ್ನು ಉಪಚರಿಸಿದರು. ಆದರೆ ಅದು ಪ್ರಯೋಜನವಾಗದೆ ಮಗುವಿನ ಉಸಿರು ನಿಂತಿತು. ತಂದೆ ಸಿದ್ಧರಾಮಯ್ಯನ ಗೋಳು ಮಠದ ಆವರಣವನ್ನೆಲ್ಲ ವ್ಯಾಪಿಸಿತು. ಯಾರಿಗೆ ತಾನೆ ಪುತ್ರನನ್ನು ಕಳೆದುಕೊಂಡಾಗ ದುಃಖವಾಗುವುದಿಲ್ಲ? ಹಾಗೆಯೇ ಸಿದ್ಧರಾಮಯ್ಯನು ದುಃಖಪಟ್ಟ.

ಕೆಲಸ ಮಾಡುತ್ತಿದ್ದ ಕೆಲವು ಜನ ಹಿರಿಯರು ಈತನ ದುಃಖವನ್ನು ನೋಡಿ 'ಸಿದ್ಧರಾಮಯ್ಯ ಶ್ರೀಗಳ ಶಿವಪೂಜೆ ಮುಗಿಯುತ್ತಾಬಂದಿದೆ, ನೀನು

ನಿಜವಾಗಿಯೂ ಗುರುಸೇವೆ ಮಾಡುತ್ತಿರುವೆ. ಗುರುವನ್ನು ನಂಬು, ಗುರುದೇವ ನಿನ್ನ ಮಗುವನ್ನು ಬದುಕಿಸಿ ಕೊಡುತ್ತಾನೆ. ಕೊಡಲೇ ಹೋಗಿ ಅರಿಕೆ ಮಾಡಿಕೊ ಎನ್ನಲು' ಆತ ಆಕ್ಷಣದಲ್ಲಿಯೇ ಹೋಗಿ ಶ್ರೀಗಳ ಚರಣಗಳನ್ನು ಹಿಡಿದು ಗೋಳಾಡಿದನು.

ಶ್ರೀಗಳು ವಿಷಯವರಿತು 'ಏಳು ಸಿದ್ಧರಾಮಯ್ಯ ಭಯಪಡಬೇಡ, ಮೃತ್ಯುಂಜಯನಿದ್ದಾನೆ. ಅವನ ಕೃಪೆಯಾದರೆ ವಿಷವು ಅಮೃತವಾಗುತ್ತದೆ. "ಭಕ್ತೋದ್ಧಾರಕನಾದ ಶಿವನು ಭಕ್ತರ ಕಲ್ಯಾಣಕ್ಕಾಗಿ ವಿಷಪಾನ ಮಾಡಿ ವಿಷಕಂಠನಾಗಲಿಲ್ಲವೆ ?" ಎಂದು ಸಮಾಧಾನ ಹೇಳಿ ಮಗುವನ್ನು ಪೂಜಾಮಂದಿರಕ್ಕೆ ತರಿಸಿ ಮಗುವಿನ ದೇಹಕ್ಕೆಲ್ಲಾ ಭಸ್ಮ ಲೇಪಿಸಿ ಶ್ರೀಗುರುವು ಮಂತ್ರ ಜಪಿಸಲು ಆ ಸರ್ಪವು ಎಲ್ಲಿಂದಲೋ ಬಂದು ಹೆಡೆ ಎತ್ತಿ ಆಡುತ್ತಿರಲು ಮಗುವಿಗೆ ಕಚ್ಚಿದ ಜಾಗವನ್ನು ಬೆರಳಿನಿಂದ ಶ್ರೀಗಳು ತೋರಿಸಲು ಸರ್ಪವು ವಿಷವನ್ನು ಹೀರಿತು. ಪೂಜಾ ಬಟ್ಟಲಿನಲ್ಲಿದ್ದ ಹಾಲನ್ನು ಮುಂದಿಡಲು ಹಾವು ಕುಡಿದು ಶ್ರೀಗಳವರ ಕಡೆ ದೃಷ್ಟಿಸಿ ನೋಡಲು 'ನಾಗರಾಜ ಹೀಗೆ ಮಾಡಬಾರದು ?' ಜನರು ಭಯಪಡುತ್ತಾರೆ ? ಬೇಗ ಹೊರಟು ಹೋಗು ಎನಲು, ಸರ್ಪವು ಪೂಜಾಮಂದಿರದ ಬಾಗಿಲಿಗೆ ಬಂದು ಹೊರಗೆ ಹೋಯಿತು. ಮಲಗಿದ್ದ ಮಗು ಕೆಲವು ನಿಮಿಷಗಳು ಕಳೆದು ಕೂಡಲೇ ಉಸಿರುಬಿಡುತ್ತ ಎದ್ದು ಕುಳಿತುಕೊಳ್ಳಲು ಸಿದ್ಧರಾಮಯ್ಯನಿಗೆ ಹೋಗಿದ್ದ ಜೀವ ಬಂದಂತಾಯಿತು. ನೆರೆದಿದ್ದ ಕೆಲಸಗಾರರಿಗೆ ಆಶ್ಚರ್ಯದ ಜೊತೆಗೆ ಭಕ್ತಿ ಮೈದುಂಬಿ ಎಲ್ಲರೂ ಗುರುವು 'ಭವರೋಗ ವೈದ್ಯನೆಂದು' ಕೊಂಡಾಡಿದರು.

ಶ್ರೀಗುರು ಮಹಿಮೆಯಿಂದ ಸತ್ತ ಮಗುವು ಬದುಕಿದ ವಿಷಯ ಸುತ್ತ ಮುತ್ತಲ ಗ್ರಾಮಗಳಿಗೂ ಹಬ್ಬಿತು. ಮುಂದೆ ಆ ಗ್ರಾಮಗಳಲ್ಲಿ ಯಾರಿಗಾದರೂ ಹಾವು, ಚೇಳು ಕಚ್ಚಿದರೆ ಅಂಕನಹಳ್ಳಿ ಗವೀಮಠಕ್ಕೆ ಬಂದು ಗುರುಗಳಿಂದ ನಿವಾರಣೆಹೊಂದಿ ಹೋಗುತ್ತಿದ್ದರು.

ಹಿಂದಿನ ಶ್ರೀ ಗುರು ಬಸವಯ್ಯ ಸ್ವಾಮಿಗಳು ಮಠದ ಪೂಜೆಗೆಂದು ಒಂದು ಭಾವಿಯನ್ನುತೆಗೆಸಲು ಅದರಲ್ಲಿ ಜಲ ಬರದೆ ಹೋದ ಕಾರಣ ಶ್ರೀಗುರು ಘಿರಂಗೀಶ್ವರರ ಗದ್ದುಗೆಗೆ ಮಂಗಳಾರತಿ ಮಾಡಿಸಿ, ಎಲೈ ! ಗುರುವೆ ನಿನ್ನ ನಿತ್ಯಾಭಿಷೇಕಕ್ಕೆಂದು ಭಾವಿ ತೆಗೆಸಿದೆ; ಎಷ್ಟು ಆಳ ತೋಡಿದರೂ 'ಜಲ ಬರ

ಲ್ಲಿಲ್ಲ. ನೀನು ಇನ್ನೂ ಎಷ್ಟು ಕಾಲ ನಮ್ಮನ್ನು ಪರೀಕ್ಷಿಸುವೆ, ನಮ್ಮ ಮೇಲೆ ಕೃಪೆ ಮಾಡು' ಎಂದು ಪ್ರಾರ್ಥಿಸಿದರು. ಆದರೂ ಜಲ ಬರಲಿಲ್ಲ. ಶ್ರೀಗಳು ಜಲ ಬರುವವರೆಗೂ ನಾನು ಮೇಲೇಳುವುದಿಲ್ಲವೆಂದು ಭಾವಿಯೊಳಗೆ ಮೂರು ದಿನಗಳ ತನಕ ಉಪವಾಸ ಕುಳಿತರು. ಅನಿರೀಕ್ಷಿತವಾಗಿ ಸರ್ಪ ಬಂದು ಕಚ್ಚಿತು. ನೆರೆದಿದ್ದ ಶ್ರೀ ಮಾದೆಗೌಡ, ಹುಣಸೇದೊಡ್ಡಿ ಶ್ರೀ ಬಾಳಯ್ಯ ನವರು ಮುಂತಾದ ಗುರುಸೇವಕರು 'ಗುರುದೇವ, ಇದೀಗ ಹಾವು ಕಚ್ಚಿದೆ, ಔಷಧಿಯನ್ನಾದರೂ ಮಾಡಿಸುತ್ತೇವೆ, ಅಪ್ಪಣೆ ಕೊಡಿಸಬೇಕೆಂದು' ಭಯ ದಿಂದ ಪ್ರಾರ್ಥಿಸಿಕೊಂಡರು.

"ಆಗ ಗುರುಬಸವಯ್ಯ ಸ್ವಾಮಿಗಳು ಭಯ ಪಡಬೇಡಿ. ನಾನು ಶ್ರೀಗುರುವನ್ನು ನಂಬಿರುವೆ, ಆತನು ನಮ್ಮನ್ನು ಕೈಬಿಟ್ಟರೆ ಈ ಸ್ಥಳದಲ್ಲಿಯೇ ಪ್ರಾಣ ಬಿಡುತ್ತೇನೆ" ಜಲ ಬರುವ ತನಕ ನಾವು ಮೇಲಿ ಏಳುವುದಿಲ್ಲ. ಇದು ನಮ್ಮ ನಿರ್ಧಾರ ಎಂದರು." ಶ್ರೀಗಳ ದೃಢ ಪ್ರತಿಜ್ಞೆಯನ್ನು ಕೇಳಿದ ಭಕ್ತಾದಿಗಳು ಶ್ರೀಗಳ ಕಾವಲಿಗಾಗಿ ಅಲ್ಲಿಯೇ ಕುಳಿತರು. ಶ್ರೀ ಗುರು ಬಸವಯ್ಯ ಸ್ವಾಮಿಗಳ ಅಚಲ ನಂಬಿಕೆ, ಪ್ರತಿಜ್ಞೆಯನ್ನು ಕೇಳಿದ ಗುರುದೇವ, 'ನಾನೆಹಠವಾದಿ ಎಂದರೆ! ನನಗಿಂತ ಈತ ಹಠವಾದಿ ನಿಜದೃಢಭಕ್ತಿ ಈತನದು' ಎಂದು ತಿಳಿದು ಕೂಡಲೇ ಜಲ ಕರುಣಿಸಿದ.

ಬಾವಿಯೊಳಗೆ ಜಲ ಕಂಡ ಕೂಡಲೆ ಶ್ರೀಗಳು ಹರ್ಷದಿಂದ ಮೇಲೆದ್ದು, ಅದೇ ಪವಿತ್ರ ಜಲದಿಂದ ಸ್ನಾನಮಾಡಿ ಬಂದು 'ಗುರು ಫಿರಂಗೀಶ್ವರರ ಪೀಠ ದಲ್ಲಿ ಕುಳಿತು' ಆ ಗುರುದೇವನ ನಾಮ ಸ್ಮರಣೆಮಾಡಿ ಹಾವು ಕಚ್ಚಿದ ಸ್ಥಳಕ್ಕೂ, ಅದರ ಮೇಲು ಭಾಗದಲ್ಲಿ ಮೂರು ವಿಭೂತಿ ಗೆರೆಯನ್ನು ಹಾಕಿ, ದೇಹಕ್ಕೆಲ್ಲ ಭಸ್ಮ ಪ್ರಸಾದ ಲೇಪನ ಮಾಡಿಕೊಳ್ಳಲು ವಿಷ ಕ್ರಮೇಣ ಇಳಿದು ಗುಣವಾಯಿತು. ಪೂಜ್ಯರೆ ಈ ವಿಷಯವನ್ನು ಶಿಷ್ಯರಿಗೆ ಅನೇಕ ಬಾರಿ ನಿರೂ ಪಿಸಿರುತ್ತಾರೆ.

ಶ್ರೀ ಬಸವಯ್ಯ ಸ್ವಾಮಿಗಳ ಅನನ್ಯ ಭಕ್ತನಾದ ಹಾರೋಹಳ್ಳಿ ಪಟೇಲ್ ಶ್ರೀ ಬಾಳಯ್ಯನು ಮಠದ ಕೆಲಸ ಮಾಡುತ್ತಿರುವಾಗ ಮಠದಲ್ಲಿ ಸರ್ಪ ಕಚ್ಚಲು ಆತನಿಗೂ, ಕಚ್ಚಿದ ಜಾಗದ ಮೇಲೆ ಭಸ್ಮದ ಮೂರು ಗೆರೆ ಗಳನ್ನು ಹಾಕಿ 'ಶ್ರೀ ಫಿರಂಗೀಶ್ವರರ ಗದ್ದುಗೆಯಲ್ಲಿ ಕುಳಿತು ನಾಮಸ್ಮರಣೆ

ಮಾಡಲು ಆತನಿಗೂ ಗುಣವಾಯಿತು. ಶ್ರೀಮಠವು ಬಹಳ ಹಿಂದೆ ನಾಗಮಯ ವಾಗಿತ್ತು. ಸ್ವಲ್ಪ ತಪ್ಪು ನಡೆದರೆ, ನಡೆದವರನ್ನೇ ಕಚ್ಚುವುದು ಈ ಸ್ಥಳ ದಲ್ಲಿ ಸಹಜವಾಗಿತ್ತು.

ಈ ರೀತಿ ಶ್ರೀ ಫಿರಂಗೀಶ್ವರರು ಭಕ್ತರ ಅನೇಕ ಕಷ್ಟಗಳನ್ನು ನಿವಾ ರಣೆಮಾಡಿ 'ಕಲಿಯುಗದ ಸಂಜೀವಿನಿ' ಎಂದು ಪ್ರಸಿದ್ಧರಾದರು "ಪರೋ ಪಕಾರಾಯ ಸತಾಂ ವಿಭೂತಯಃ" ಎಂಬ ನುಡಿ ಶ್ರೀಗಳ ಪರೋಪಕಾರ ಕಾರ್ಯ ವನ್ನು ಸಮರ್ಥಿಸುತ್ತದೆ.

---

## ನುಡಿಮುತ್ತುಗಳು

ಆತ್ಮಾನಾತ್ಮ ವಿಚಾರ ಮಾಡಿರಿ,
ಸ್ವಸ್ವರೂಪವನ್ನು ಅರಿಯಿರಿ,
ದೇಹಕ್ಕೆ ಆಹಾರ ಬೇಕೇಬೇಕು,
ಅದರಂತೆಯೇ ಆತ್ಮಕ್ಕೆ ಪ್ರಾರ್ಥನೆ ಅತ್ಯಾವಶ್ಯಕ.

ಸ್ವಾರ್ಥರಹಿತ ಸೇವೆಯೇ ಬಾಳುವೆಯ ಸಾರ.
ವಿಶ್ವಪ್ರೇಮವೇ ಮನುಷ್ಯನ ಜೀವನಾಧಾರ.
ಭಗವಂತನನ್ನು ಸಮದೃಷ್ಟಿ ಮತ್ತು
ಸಮಚಿತ್ತವೆಂಬ ಪುಷ್ಪಗಳಿಂದ ಆರಾಧಿಸಿ.

# ಗಾರುಡಿಗರಗೆ ತತ್ವೋಪದೇಶ

ಶ್ರೀ ಗುರು ಫಿರಂಗೀಶ್ವರರು ಸಾಧುಗೆ ಸಾಧುವು, ಮಾಧುರ್ಯಗುಣ ಉಳ್ಳವರಿಗೆ ಮಧುರವಾಗಿಯೂ, ತೊಂದರೆಪಡಿಸುವ ದುಷ್ಟರನ್ನು ಶಿಕ್ಷಿಸುವವ ರಾಗಿಯೂ, ಜನರ ಕಷ್ಟಗಳನ್ನು ನಿವಾರಣೆ ಮಾಡುವುದರಲ್ಲಿ ಸಿದ್ಧಪುರುಷ ರಾಗಿಯೂ, ಲೀಲಾಮೂರ್ತಿಗಳಾಗಿಯೂ, ಮಹಾಮಹಿಮರೆಂದು ಕೀರ್ತಿ ಪಡೆದು ನಾಡಿನ ಎಲ್ಲಾ ಕಡೆ ಸಂಚಾರ ಮಾಡತೊಡಗಿದರು.

ಒಮ್ಮೆ ಮಾಗಡಿ ತಾಲ್ಲೂಕು ಉಡಿಗೆರೆಯ ಗ್ರಾಮದ ಓರ್ವ ಭಕ್ತನ ಮನೆಯಲ್ಲಿ ಶ್ರೀಗಳು ಬಿಡಾರ ಮಾಡಿರಲು, ಆ ಗ್ರಾಮಕ್ಕೆ ಕೆಲವು ಜನ ಮಂತ್ರ, ತಂತ್ರಗಳನ್ನು ಬಲ್ಲ ಗಾರುಡಿಗರು ಬಂದು ಗ್ರಾಮದ ಮುಂದೆ ಒಂದು ಮಂತ್ರ ಸ್ತಂಭವನ್ನು ಸ್ಥಾಪಿಸಿ, ಭಯಂಕರವಾದ ಯಕ್ಷಿಣಿ ಚಮತ್ಕಾರಗಳನ್ನು ಜನರಿಗೆ ತೋರಿಸಿ ಜನರನ್ನು ಮರುಳುಮಾಡಿ, ನಿಮ್ಮ ಗ್ರಾಮದಲ್ಲಿ ಯಾರಾ ದರೂ ಈ ವಿದ್ಯೆಯನ್ನು ಬಲ್ಲ ಬುದ್ಧಿವಂತರಿದ್ದರೆ, ಈ ಸ್ಥಂಭವನ್ನು ತೆಗೆಯಲಿ, ಇಲ್ಲವಾದರೆ ನಮ್ಮನ್ನು ಗೌರವಿಸಿ, ಪ್ರತಿ ಮನೆಯವರು ಹತ್ತು ಸೇರು ದವಸ, ಒಂದು ರೂಪಾಯಿ ಕೊಡಬೇಕೆಂದು ಕೇಳಿದರು. ಅಲ್ಲಿ ನೆರೆದಿದ್ದ ಜನರಾರೂ ಮುಂದೆ ಬಂದು ಸ್ಥಂಭವನ್ನು ತೆಗೆಯಲಾಗಲಿಲ್ಲ. ಆದ್ದರಿಂದ ಆ ಗಾರುಡಿ ಗರು ಪ್ರತಿಯೊಬ್ಬರ ಮನೆಯಿಂದ ದವಸ ಮತ್ತು ಹಣವನ್ನು ಕಡ್ಡಾಯವಾಗಿ ವಸೂಲಿ ಮಾಡುತ್ತಾ ಶ್ರೀಗಳು ಬಿಡಾರ ಮಾಡಿದ್ದ ಮನೆಗೂ ಬಂದು ಕೇಳಿ ದರು. ಆ ಮನೆಯ ಯಜಮಾನನಿಗೆ ಈ ಡಾಂಭಿಕಗಳಲ್ಲಿ ಆಸಕ್ತಿಯಿಲ್ಲ ವಾದ್ದರಿಂದ, ಗಾರುಡಿಗರಿಗೆ, ಧಾನ್ಯ ಮತ್ತು ಹಣವನ್ನು ಕೊಡಲು ನಿರಾಕರಿಸಿ ದನು. ಅವರುಗಳು ಈತನ ಮಾತುಗಳನ್ನು ಕೇಳಿ ಕೋಪಗೊಂಡು "ನೋಡಯ್ಯ ನೀನು ನಮಗೆ ಧಾನ್ಯ ಮತ್ತು ಹಣ ಕೊಡದೆ ಹೋದಲ್ಲಿ ನಿನ್ನ ಗೋವುಗಳು ಹಾಳಾಗುವಂತೆ ಮಾಡಿಬಿಡುತ್ತೇವೆ" ಎಂದು ಹೆದರಿಸಿದರು. ಭಯಗೊಂಡ ಯಜಮಾನ ಪೂಜ್ಯ ಶ್ರೀ ಫಿರಂಗೀಶ್ವರರಲ್ಲಿ ಬಂದು ಅರಿಕೆ ಮಾಡಿಕೊಂಡನು.

ಶ್ರೀಗಳು, ಆ ಗಾರುಡಿಗರನ್ನು ಕರೆದು, ನಿಮ್ಮ ಜೀವನೋಪಾಯಕ್ಕಾಗಿ ಕಾಯಕ ಮಾಡಿ ಜೀವನ ನಡೆಸಿ, ಆದರೆ ಪರರಿಗೆ ಹಿಂಸೆ ಮಾಡಬಾರದು. "ಪರೋಪಕಾರಃ ಪುಣ್ಯಾಯ, ಪಾಪಾಯ ಪರಪೀಡನಂ" ಎಂಬ ಪ್ರಮಾಣ ವಚನದಂತೆ ನೀವುಗಳು ಜನರಿಗೆ ತೊಂದರೆ ಮಾಡಿ ನಿಮ್ಮ ಜೀವನ ನಡೆಸಿದರೆ ಭಗವಂತನು ಮೆಚ್ಚಲಾರ, ಎಂಬುದಾಗಿ ತಿಳುವಳಿಕೆ ಹೇಳಿದ್ದಾಗ್ಯೂ ಕೇಳದೆ, ತಾತ್ಸಾರ ಭಾವನೆಯಿಂದ ಅವರುಗಳು "ಕಣಜದ ಹುಳುಗಳನ್ನು ಮಾಡಿ" ಶ್ರೀಗಳ ಮೇಲೆ ಪ್ರಯೋಗಿಸಿದರು. ಪೂಜ್ಯರು ಅವುಗಳ ಮೇಲೆ ಮಂತ್ರಾಕ್ಷತೆ ಹಾಕಲು ಅವು ಸುಟ್ಟುಹೋದವು. ಇದನ್ನು ಕಂಡು ಗಾರುಡಿಗರಲ್ಲಿ ಒಬ್ಬನು ಕೋಪಗೊಂಡು, ಸ್ವಾಮಿ! ನಿಮ್ಮಲ್ಲಿ ಶಕ್ತಿ ಇದ್ದರೆ ನಮ್ಮ ಮಂತ್ರ ಸ್ತಂಭವನ್ನು ಕಿತ್ತು ತೆಗೆಯಬಲ್ಲಿರಾ ? ಎಂದು ಪ್ರಶ್ನಿಸಿದನು. ಪೂಜ್ಯರು ಶಾಂತಿಯಿಂದಲೇ ಗ್ರಾಮದ ಮುಂದೆ ನೆಡಲಾಗಿದ್ದ ಸ್ತಂಭ ಸಮೀಪಕ್ಕೆ ಹೋಗಿ, ಅದರ ಮೇಲೆ ಮತ್ತು ಅವರುಗಳ ಮೇಲೆ ಮಂತ್ರಾಕ್ಷತೆಯನ್ನು ಹಾಕಿ 'ನಿಮ್ಮ ಮಂತ್ರಗಳೆಲ್ಲ ಮರೆತು ಹೋಗಲಿ' ಎಂದು ಉಚ್ಚರಿಸಲು ಕೂಡಲೆ ನೆಟ್ಟಿದ್ದ ಸ್ತಂಭವು ಕೆಳಕ್ಕುರುಳಿತು. ಅವರುಗಳಿಗೆ ಮಂತ್ರಗಳು ಮರೆತುಹೋದುವು. ಅವರಿಗಿದ್ದ ಅಹಂಕಾರ ಮುರಿಯಿತು. ಬಾಯಿ ಇಲ್ಲದ ಮೂಕರಂತೆ ಎಲ್ಲರೂ ಕೈ ಜೋಡಿಸಿ ನಿಂತರು.

ಅವರುಗಳಲ್ಲಿ ಹಿರಿಯನೂ, ಮಂತ್ರವಾದಿಯೂ ಆದ ರಾಮಲಿಂಗಯ್ಯನು, ಭಯಭಕ್ತಿಯಿಂದ ಶ್ರೀಗಳ ಚರಣಗಳಿಗೆ ನಮಸ್ಕಾರ ಮಾಡಿ "ಮಹಾಸ್ವಾಮಿ, ಸರ್ವಶಕ್ತರೂ, ಕರುಣಾಮೂರ್ತಿಗಳೂ ಆದ ತಾವು ನಮ್ಮವರು ತಿಳಿಯದೆ ಮಾಡಿದ ಈ ಅಪಚಾರವನ್ನು ಕ್ಷಮಿಸಿ ನಮ್ಮನ್ನು ಉದ್ಧಾರ ಮಾಡಬೇಕೆಂದು ಬೇಡಿಕೊಂಡನು."

ತಪಸ್ವಿಗಳನ್ನು ಸಾಮಾನ್ಯರೆಂದು ತಿಳಿದು ನೀವು ವರ್ತಿಸಿದ್ದರಿಂದ ಈ ತೊಂದರೆಗೆ ಒಳಗಾಗಬೇಕಾಯಿತು. ತಿಳಿಯದ ಜನರಿಗೆ ತೊಂದರೆಪಡಿಸುವುದು ನಿಮಗೆ ಹಿತವಲ್ಲ, ಅದರಿಂದ ನಿಮಗೆ ಕೇಡಾದೀತು ಎಚ್ಚರ!

ಜೀವಿತಂ ಶಿವಭಕ್ತಾನಾಂವರಂ ಪಂಚದಿನಾನಿಚ ।
ನಾಜಕಲ್ಪ ಸಹಸ್ರಂ ಚ ಭಕ್ತಿಹೀನಂತು ಶಂಕರಿ॥

ಸಜ್ಜನರಿಗೆ ಜುಗುಪ್ಸೆ ತರುವ ಜೀವನವನ್ನು ಅಜಕಲ್ಪ ಸಹಸ್ರ ವರ್ಷ

ಪರ್ಯಂತ ಜೀವಿಸಿದರೇನು? ಆ ಸಜ್ಜನರಿಂದ ಸೈ ಎನಿಸಿಕೊಂಡು ಬಂದು ಕೈಯ ಬೆರಳಮೇಲೆ ಎಣಿಸುವಷ್ಟು ದಿವಸ ಬದುಕಿದರೂ ಸಾಕು, ಅರ್ಥಾತ್ ಐದು ದಿನ ಬದುಕಿದ್ದರೆ ಸಾಕು? ಪರಹಿಂಸಕ ದೀರ್ಘ ಜೀವನದಿಂದ ಕೇವಲ ಲೋಕಪೀಡೆ. ಪರಾರ್ಥ-ಸಮರ್ಪಕವಾದ ಬಾಳು ಅಲ್ಪಾವಧಿಯದಾದರೂ ಅಮರವೆನಿಸೀತು. ಎಂದು ಋಷಿಗಳು ನುಡಿದಿರುತ್ತಾರೆ.

ನಿಮ್ಮ ಜೀವನೋಪಾಯಕ್ಕಾಗಿ 'ಯಕ್ಷಣಿ ಮಂತ್ರಗಳ ಸಿದ್ಧಿಯನ್ನು ಪಡೆಯುವುದು ಯೋಗ್ಯವಲ್ಲ' 'ಶಿವನ ಐಶ್ವರ್ಯವೇ ಆದ ಶಿವಪಂಚಾಕ್ಷರೀ ಯನ್ನು ಜಪಿಸಿರಿ, ಇದರಿಂದ ನಿಮ್ಮ ಇಷ್ಟಾರ್ಥವೆಲ್ಲ ನೆರವೇರುವುದು ಎಂದು ನಿರೂಪಿಸಿದರು.

ಆ ಗಾರುಡಿಗರು ಗುರುದೇವ, ಆ ಪಂಚಾಕ್ಷರಿ ಮಹಾಮಂತ್ರದ ಮಹಿಮೆಯನ್ನು ಅಪ್ಪಣೆ ಕೊಡಿಸಬೇಕೆಂದು ಪ್ರಾರ್ಥಿಸಿಕೊಂಡರು.

ಸಪ್ತಕೋಟಿ ಮಂತ್ರಗಳಲ್ಲಿ ಪಂಚಾಕ್ಷರೀ ಮಂತ್ರವು ಶ್ರೇಷ್ಠವಾದುದು.

ಏಷ ಪಂಚಾಕ್ಷರೋ ಮಂತ್ರೋಜಪ್ತೃಣಾಂ ಮುಕ್ತಿದಾಯಕಃ ।
ಸಂಸೇವ್ಯತೇ ಮುನಿಶ್ರೇಷ್ಠೈರಶೇಷೈಃ ಸಿದ್ಧಿಕಾಂಕ್ಷಿಭಿಃ ॥

(ಸ್ಕಾಂದಪುರಾಣ)

ಈ ಐದು ಅಕ್ಷರವುಳ್ಳ ಮಂತ್ರವನ್ನು ಜಪಿಸುವವರಿಗೆ ಮುಕ್ತಿಯನ್ನೀಯುವುದು. ಸಿದ್ಧಿಯನ್ನು ಬಯಸುವ ಸಕಲ ಮುನಿವರೇಣ್ಯರು ಇದನ್ನು ಜಪಿಸಿರುತ್ತಾರೆ.

ಭವಪಾಶನಿಬದ್ಧಾನಾಂ ದೇಹಿನಾಂಹಿ ತಕಾಮ್ಯಯಾ ।
ಆಹಾ ನಮಃ ಶಿವಾಯೇತಿ ಮಂತ್ರ ಮಾದ್ಯಂ ಶಿವಃ ಸ್ವಯಂ॥

(ಸ್ಕಾಂದಪುರಾಣ)

ಸಂಸಾರವೆಂಬ ಹಗ್ಗದಿಂದ ಕಟ್ಟಲ್ಪಟ್ಟ ಜೀವನಿಗೆ ಹಿತವನ್ನುಂಟು ಮಾಡಲೋಸುಗ ಶಿವನು ತಾನೇ "ಶಿವಪಂಚಾಕ್ಷರೀ" ಎಂಬ ಮಂತ್ರವನ್ನು ಹೇಳಿದನು.

ತಸ್ಮಾತ್ಸರ್ವಪ್ರದೋಮಂತ್ರಃ ಸೋಽಯಂಪಂಚಾಕ್ಷರಃ ಸ್ಮೃತಃ ।
ಸ್ತ್ರೀಭಿಃ ಶೂದ್ರೈಶ್ಚ ಸಂಕೀರ್ಣೈರ್ಧಾರ್ಯತೇ ಮುಕ್ತಿಕಾಂಕ್ಷಿಭಿಃ

(ಸ್ಕಾಂದಪುರಾಣ)

ಈ ಪಂಚಾಕ್ಷರಿ ಮಂತ್ರವು ಸಕಲೇಷ್ಟಪ್ರದವಾಗಿರುವುದರಿಂದ ಮೋಕ್ಷವನ್ನಪೇಕ್ಷಿಸುವ ಹೆಂಗಸರೂ, ಗಂಡಸರೂ, ಶೂದ್ರರೂ ಮಿಶ್ರ ಜಾತಿಯವರೂ ಉಚ್ಚರಿಸಬಹುದು. ಈ ಮಂತ್ರವು ನಿಷ್ಠೆಯಿಂದ ಜಪಿಸುವವನ ಇಷ್ಟಾರ್ಥವನ್ನು ಕೊಡಬಲ್ಲದ್ದಾಗಿದೆ. ಈ ವಿಷಯವಾಗಿ 'ಪಂಚಾಕ್ಷರಿ ಮಹಿಮೆಯನ್ನು ಹೇಳುವೆನು ಕೇಳಿ:

ಈ ಮಂತ್ರದ ಮಹಿಮೆಯನ್ನು, ವೇದ, ಆಗಮ, ಪುರಾಣಾದಿಗಳೂ, ವರ್ಣಿಸಿವೆ. ಪ್ರತಿಯೊಬ್ಬ ಭಾರತೀಯನೂ ಇದನ್ನು ತಿಳಿದು ಉಚ್ಚರಿಸಬೇಕು. ಅದು ಐದು ಅಕ್ಷರಗಳಿಂದ ಕೂಡಿದೆ. ಇದು ಓಂಕಾರದಕ್ಷರ, ಸಕಲ ಮಂತ್ರಗಳ ಮೂಲ, ಪಂಚಬ್ರಹ್ಮ, ಪರಶಿವನೆ ಈಶಾನಾದಿ ಪಂಚ ಮುಖಗಳೇ ಈ ಐದು ಅಕ್ಷರಗಳು, ಶಿವನಿಗೂ ಮಂತ್ರಕ್ಕೂ ಬೇಧವಿಲ್ಲ. ಋಷಿಗಳು ದಿನ 'ನಮಶ್ಶಿವಾಯ' ಎನುತಿಹರು. ಈ ಮಂತ್ರದಲ್ಲಿ ಸಕಲ ಬ್ರಹ್ಮಾಂಡವೂ ಹುದುಗಿಹುದು. ವೇದಶಾಸ್ತ್ರಾಗಮ ಪುರಾಣಾದಿಗಳೂ ಈ ಮಂತ್ರಕ್ಕೆ ಸರಿದೂಗವು. ಮೂಲ ಪಂಚಾಕ್ಷರಿಯ ಮಂತ್ರವಿಲ್ಲದೆ ಮಾಡುವ ಕರ್ಮಗಳೆಲ್ಲವೂ ವ್ಯರ್ಥ. ಇದು ಸಕಲ ವರ್ಣದ ಮೂಲ. ಯಾವ ಕುಲದವನೇ ಆಗಿರಲಿ ಭಾವಶುದ್ಧದೊಳೊಮ್ಮೆ ಈ ಮಂತ್ರವನ್ನು ಜಪಿಸಿದವನು ಮುಕ್ತನಹನು. ಹಿಂದೊಮ್ಮೆ ಸಾನಂದನೆಂಬುವನು ಶರಣ ತತ್ಪರನಾಗಿ ಅನವರತ ಶೈವಾಗಮ ನಿಯಮ ಕುಂದದಂತೆ ಶಿವಪೂಜೆಯನ್ನು ಮಾಡಿ, ಶಿವಭಕ್ತಿ ನಿಷ್ಠೆಯಿಂದ ನಡೆಯುವಾಗ, ನುಡಿಯುವಾಗ, ಎಡಹುವಾಗ, ನಿದ್ರಿಸುವಾಗ, ಎಚ್ಚರಿಸುವಾಗ, ಕನಸಿನಲ್ಲಿ, ಕೂಡುವಲ್ಲಿ, ಕೊಂಬಲ್ಲಿ, ಸ್ನಾನ ಮಾಡುವಾಗ, ನೀರೆರೆಯುವಾಗ, ಗಂಧಪುಷ್ಪಗಳಿಂದ ಮೃಡನ ನಿಜಮೂರ್ತಿಯಾಗಿರುವ ಪಂಚಾಕ್ಷರೀ ಮಂತ್ರವನ್ನು ಜಪಿಸಲು ಹರನು ಅವನ ಭಕ್ತಿಗೆ ಮೆಚ್ಚಿ ಮೈದೋರಿ ವರವ ಬೇಡೆನಲು 'ನಿಮ್ಮಯ ಪದದ ಭಕ್ತಿಯೇ ಸಾಕು' ಎಂದು ಸಾನಂದನು ಹೇಳಿದನು. ಆಗ ಪರಶಿವನು ಕರುಣೆಯಿಂದ ಎಲೈ ಮಗನೆ! ನಮ್ಮಿಬ್ಬರಿಗೂ ಭೇದವಿಲ್ಲ. ಜನನ ಮರಣಗಳ ಭಾದೆ ನಿನಗಿಲ್ಲ. 'ಘನವೆನಿಪ ಗಣಪದಂ ನಿತ್ಯವಾಗಿರಲಿ, ಎಂದು ವರವನ್ನು ಕೊಟ್ಟು ಅದೃಶ್ಯನಾದನು.

ಇತ್ತ ಸಾನಂದನು ತನ್ನ ಆಶ್ರಮಕ್ಕೆ ತೆರಳಿ ಪರಶಿವನ ಮೂರ್ತಿಯಾದ

ಶಿವಲಿಂಗವನ್ನು ತ್ರಿಕಾಲಗಳಲ್ಲಿಯೂ ಪೂಜಿಸುತ್ತ ಬಂದ ಅತಿಥಿಗಳನ್ನು ಸತ್ಕರಿಸುತ್ತಿದ್ದನು. ಒಂದು ದಿನ ಅವನು ದೇವತಾರ್ಚನೆ ಮಾಡುತ್ತಿರುವಾಗ ಸಕಲಾಗಮ ಪುರಾಣ ವಾಕ್ಯಗಳಿಂದ ನರಕದಲ್ಲಿ ಅನುಭವಿಸುತ್ತಿರುವ ಪಾಪಿಷ್ಟರ ಯಾತನೆಗಳನ್ನು ಕೇಳಿ ಹೆಚ್ಚು ದುಃಖಗೊಂಡು ಅವರನ್ನು ತಾನು ಉದ್ಧರಿಸಲು ದಿವ್ಯ ಪುಷ್ಪಕ ವಿಮಾನವನ್ನು ಏರಿ ಯಮಪುರಕ್ಕೆ ಹೋಗಿ ಕುಂಭೀಪಾಕ ಮೊದಲಾದ ನರಕಗಳ ಕಂಡು, ನರಕದಲ್ಲಿ ಇವರನ್ನು ಇಟ್ಟು ಯಾತನೆಪಡಿಸಲು ಕಾರಣವೇನೆನ್ನಲು "ಅರಿದು ಮರೆದೊಮ್ಮೆ ಪಂಚಾಕ್ಷರಿಯ ನೆನೆಯದ ಪಾಪಕರ್ಮಿಗಳವರು" ಎಂದು ಯಮನು ಹೇಳಲು ಬಳಿಕ ಸದ್ಭಕ್ತನಾದ ಸಾನಂದನು ಶಿವನ ಪಾದಾಂಭುಜವ ಧ್ಯಾನಿಸುತ್ತ ಹರ್ಷದಿಂದ ಕಣ್ಮುಚ್ಚಿ ಗಂಭೀರ ವಾಕ್ಯದಿಂದ ಪಂಚಾಕ್ಷರೀ ಮಂತ್ರವನ್ನು ನರಕಿಗಳಿಗೆ ಕೇಳಿಸುವಂತೆ ಕೂಗಿ ಹೇಳಿದನು. ಈ ಮಂತ್ರವನ್ನು ಶ್ರವಣ ಮಾಡಿದ ನರಕಿಗಳ ಮೇಲೆ ದೇವತೆಗಳು ಹೂ ಮಳೆಗರೆದರು. ನವರತ್ನಮಯವಾದ ಪುಷ್ಪಕ ವಿಮಾನದಲ್ಲಿ ನರಕದಲ್ಲಿದ್ದವರೆಲ್ಲರೂ ಶಿವಲೋಕಕ್ಕೆ ಹೋಗಿ ಶಿವಮಯರಾದರು. ಆದ್ದರಿಂದ ಯಾರು ಶಿವ ಪಂಚಾಕ್ಷರೀ ಮಂತ್ರವನ್ನು ಜಪಿಸುವರೋ ಅವರು ಖಂಡಿತ ಶಿವಪದವಿಯನ್ನು ಪಡೆಯುತ್ತಾರೆ. ಆದಕಾರಣ ಗಾರುಡಿಗರಾದ ನೀವುಗಳು ಶಿವನ ಪ್ರೈ ಬೇಕಾದ ಭಸ್ಮ ರುದ್ರಾಕ್ಷಿಗಳನ್ನು ಧರಿಸಿ ಶಿವಪ್ರಸಾದವನ್ನು ಪೂಜಿಸಿ ಈ ಮಂತ್ರವನ್ನು ಜಪಿಸಿರಿ ಎಂದು ಉಪದೇಶವನ್ನೀಯಲು ಅವರು ಕೃತಾರ್ಥರಾದರು.

ತುಮಕೂರು ಜಿಲ್ಲೆ ಶಿವಯೋಗಿಗಳ ತವರು, ಅನೇಕ ಶಿವಯೋಗಿಗಳು, ವನ, ಗಿರಿ ಪ್ರದೇಶಗಳಲ್ಲಿ ತಪಸ್ಸಾಚರಿಸಿ ಜನರಿಗೆ ಉತ್ತಮ ಮಾರ್ಗದರ್ಶನ ಮಾಡಿರುತ್ತಾರೆ. ಶ್ರೀ ರುದ್ರನ ನಿವಾಸವಾದ ಸಾವಂದುರ್ಗ, ಹುಲಿಯೂರುದುರ್ಗ, ಹುತ್ರಿ ದುರ್ಗಗಳ ಮಧ್ಯೆ ಶಿವಯೋಗಿಗಳ ನಿವಾಸ. ಈ ಪುಣ್ಯ ಪ್ರದೇಶದಲ್ಲಿ ನೀವುಗಳು ಇನ್ನು ಮುಂದೆ ನಿಮ್ಮಗಳ ಜೀವನಕ್ಕಾಗಿ ಯಕ್ಷಿಣಿ ವಿದ್ಯೆಯನ್ನು ಪ್ರದರ್ಶಿಸಬಾರದು. "ಗುರುವಾಕ್ಯ ಮೀರಿ ಪ್ರದರ್ಶನ ನಡೆಸಿದರೆ ನಿಮ್ಮ ವಿದ್ಯೆ ನಿಮಗೆ ಸಿದ್ಧಿಸದು" ಸಿರಿವಂತರ ಮನೆಯಲ್ಲಿ ಬೇಡಿದರೆ ಸಿರಿವಂತರಾಗಬಲ್ಲರೆ? ದೇಹವ ದಂಡಿಸಿ, ದುಡಿಮೆ ಮಾಡಿದರೆ ನಿಮ್ಮ ದಾರಿದ್ರ್ಯ ದೂರವಾಗುವುದು. "ಕಾಯಕವೇ ಕೈಲಾಸ"

ವೆಂದು ಶರಣರು ನಂಬಿ ಕಾಯಕ ಮಾಡಿ ಲೋಕದಲ್ಲಿ ಸುಖಿಗಳಾಗಿ ಕಡೆಗೆ ಶಿವ ಪದವಿಯನ್ನು ಪಡೆದರು. ಆ ಮಾರ್ಗವನ್ನೇ ನೀವು ಅನುಸರಿಸಿ ಶ್ರಮಿಸಿ ಕರ್ತವ್ಯಶೀಲರಾಗಿ ಜೀವನ ನಡೆಸಿ, ಇದರಿಂದ ದೇವರು ಮೆಚ್ಚುತ್ತಾನೆ ಎಂದು ಉಪದೇಶಿಸಿದರು.

ಆ ಗಾರುಡಿಗರಿಗೆ ಜ್ಞಾನೋದಯವಾಗಿ ಗುರು ವಾಕ್ಯದಂತೆ ತಮ್ಮ ನೀಚವೃತ್ತಿಯನ್ನು ಬಿಟ್ಟು ಸದ್ವೃತ್ತಿಯಿಂದ ಕಾಯಕ ಮಾಡಿ ಜೀವನವನ್ನು ನಡೆಸುತ್ತಾ ಶ್ರೀ ಗುರು ಮತ್ತು ದೇವರ ಕೃಪೆಗೆ ಪಾತ್ರರಾದರು.

## ಅಧಿಕಾರಿಗಳಿಗೆ ನೀತಿಬೋಧೆ

ಸದ್ಗುರು ಫಿರಂಗೀಶ್ವರರು ಭಕ್ತರ ಅಪೇಕ್ಷೆಗಳನ್ನು ನೆರವೇರಿಸಲು ಅನೇಕ ವೇಳೆ ಪ್ರವಾಸದಲ್ಲಿ ಇದ್ದುಬಿಡುತ್ತಿದ್ದರು. ಒಮ್ಮೆ ಶ್ರೀಗಳು ಪ್ರವಾಸದಿಂದ ಬಂದು ಲಂಕನಹಳ್ಳಿ ಶ್ರೀ ಗವಿಮಠದಲ್ಲಿ ಬಿಡಾರ ಮಾಡಿದ್ದರು.

ಮೈಸೂರು ಸರ್ಕಾರದ ಕಂದಾಯ, ವಿಭಾಗದ ಅಧಿಕಾರಿಗಳು ಚಿಕ್ಕಾನಹಳ್ಳಿಗೆ ಕಂದಾಯ ವಸೂಲು ಮಾಡಲು ಬಂದು ಗವಿಮಠದ ಕಂದಾಯ ಬಂದಿರುವುದಿಲ್ಲವೆಂದು ತಿಳಿದು, ಗ್ರಾಮದ ತೋಟಿಯನ್ನೂ ಸರ್ಕಾರದ ನೌಕರರನ್ನೂ ಕರೆದು "ನೀವು ಮಠಕ್ಕೆ ಹೋಗಿ ಸ್ವಾಮಿಯವರಿಗೆ ಕಂದಾಯವನ್ನು ಜಾಗ್ರತೆ ತೆಗೆದುಕೊಂಡು ಬರುವಂತೆ ತಿಳಿಸಿ, ಕರೆದುಕೊಂಡು ಬನ್ನಿ ಎಂದು ಆಜ್ಞಾಪಿಸಿದರು."

ಅವರು ಗವಿಮಠಕ್ಕೆ ಬಂದು ಸೇವಕರನ್ನು ವಿಚಾರಿಸಿ, ಶ್ರೀಗಳು ಮಠದ ಗೋಡೆಯನ್ನು ಹಾಕಿಸುತ್ತಿದ್ದಾರೆ ಎಂದು ತಿಳಿದು ಅಲ್ಲಿಗೇ ಹೋಗಿ ಸ್ವಾಮಿಯವರೇ ಕಂದಾಯ ವಸೂಲಿಗೆ ಸರ್ಕಾರದ ಅಧಿಕಾರಿಗಳು ಬಂದಿರುತ್ತಾರೆ. ತಾವು ಕಂದಾಯದ ಹಣ ತೆಗೆದುಕೊಂಡು ಬರುವಂತೆ ಹೇಳಿದ್ದಾರೆ, ಎಂದು ವಿನಂತಿ ಮಾಡಿದರು.

ಪೂಜ್ಯ ಶಿವಯೋಗಿಗಳು ಆಗಲಿ ಗೋಡೆಯನ್ನು ಕಟ್ಟಿಸುತ್ತಲಿರುವ ಈ ಕೆಲಸ ಮುಗಿಸಿಕೊಂಡು ಬರುತ್ತೇವೆ ಎಂದು ಹೇಳಿ ನೌಕರರನ್ನು ಕಳುಹಿಸಿದರು.

ಆವರು ಬಂದು ಅಧಿಕಾರಿಗಳಿಗೆ, ಶ್ರೀಗಳು ಗೋಡೆಯ ಕೆಲಸ ಮಾಡಿಸುತ್ತಾ ಇದ್ದಾರೆ, ಆ ಕೆಲಸ ಮುಗಿಸಿಕೊಂಡು ಬರುವುದಾಗಿ ತಿಳಿಸಿದರು; ಎಂದು ಮನವಿ ಮಾಡಿದರು. ಈ ಮಾತನ್ನು ಕೇಳಿದ ಅಧಿಕಾರಿಗಳು ತಾಳ್ಮೆಗೆಟ್ಟು ಸಿಟ್ಟಿನಿಂದ "ನಾವು ಅಧಿಕಾರಿಗಳು ಕಂದಾಯ ವಸೂಲು ಮಾಡುವ ಸಲುವಾಗಿ ಇಲ್ಲಿಗೆ ಬಂದಿರುವೆವು; ಕಾಯಲು ವೇಳೆಯಿಲ್ಲ. ಈಗಲೇ ಹೋಗಿ ಸ್ವಾಮಿಗಳನ್ನು 'ಹೇಗಿದ್ದರೇ ಹಾಗೆ' ಇಲ್ಲಿಗೆ ಕರೆದುಕೊಂಡು ಬರಬೇಕು ಎಂದು ದರ್ಪದಿಂದ ನುಡಿದರು."

ಆ ಕೂಡಲೆ ನೌಕರರು ಶ್ರೀ ಗವಿಮಠಕ್ಕೆ ಹೋಗಿ ಗೋಡೆಯ ಮೇಲೆ ಕುಳಿತಿದ್ದ ಶ್ರೀಗಳಲ್ಲಿ "ಹೇಗಿದ್ದರೆ ಹಾಗೆ" ಕರೆತರುವಂತೆ ಆಜ್ಞಾಪಿಸಿದ್ದಾರೆ ಎಂದು ಅರಿಕೆ ಮಾಡಿದರು.

ಶ್ರೀಗಳು ಸಂತೋಷದಿಂದಲೇ ಏನೇನು ಜವಾಬು ಕೊಡದೆ ಗೋಡೆಯ ಕೆಲಸಗಾರರಿಗೆ ಕೆಲಸ ಮುಂದುವರಿಸುವಂತೆ ಹೇಳಿ, ಗೋಡೆಯ ಮೇಲೆ ಕುಳಿತಿದ್ದಂತೆಯೇ, "ಗೋಡೆಯ ಬಸವ ಜಾಗ್ರತೆ ನಡೆ" ಎನ್ನಲು ಗೋಡೆ ಸಹಿತ ಚಿಕ್ಕಾನ ಹಳ್ಳಿಗೆ ದಯಮಾಡಿಸಿದರು. ಗೋಡೆ ಸಹಿತ ಶ್ರೀಗಳು ಬಂದುದನ್ನು ಅಧಿಕಾರಿಗಳು ಕಂಡು ಭಯಭ್ರಾಂತರಾಗಿ ಕೈಮುಗಿದು ನಿಂತರು.

ಶ್ರೀಗಳು ಜೋಳಿಗೆಯಿಂದ ಹಣ ತೆಗೆದು ನಿಮಗೆಷ್ಟು ಬೇಕೋ ತೆಗೆದುಕೊಳ್ಳಿ ಎಂದು ಮುಂದಿಟ್ಟರು. ಭಯಗೊಂಡ ಸರ್ಕಾರದ ಅಧಿಕಾರಿಗಳು ನಮಸ್ಕರಿಸಿ, ನಮ್ಮ ಅಪರಾಧವನ್ನು ಕ್ಷಮಿಸಬೇಕೆಂದು ಪ್ರಾರ್ಥಿಸ ತೊಡಗಿದರು.

ಕರುಣಾಮಯಿಗಳಾದ ಶ್ರೀ ಗುರುವು, ನಮ್ಮ ಜೀವನದ ಪರಿಚಯವಾಗಲಿ, ಈ ಕ್ಷೇತ್ರದ ಮಹಿಮೆಯಾಗಲಿ ನಿಮಗೆ ಹೊಸದು. ಸಂಯಮವಿಲ್ಲದ ಜೀವನ ರಥ ಪಥದಿಂದ ಪಲ್ಲಟವಾಗುತ್ತದೆ, ತಗ್ಗಿಗೆ ಮುಗ್ಗರಿಸುತ್ತದೆ, ಬಾಹ್ಯಾಡಂಬರದಲ್ಲಿಯೇ ಬಿದ್ದು ನುಚ್ಚುನೂರಾಗುತ್ತಾನೆ. ಇಂದಿನ ನಾಗರೀಕತೆಯಲ್ಲಿ ಅಂತರದೃಷ್ಟಿ ಅಪರೂಪವಾಗಿದೆ. ಮಾನವನ ಅಧಿಕಾರ ಅಲ್ಪ, ಶಿವನ ಅಧಿಕಾರ ಶಾಶ್ವತ. ಮಾನವನ ಜೀವನ ವೃದ್ಧಿಗೆ ಬುದ್ಧಿಯೇ ಸಾರಥಿ, ಬುದ್ಧಿಯಿಲ್ಲದೆ ಯಾವ ಪ್ರಗತಿ ಸಿದ್ಧಿಸದು. ಧರ್ಮದ ಜೀವಾಳ ದಯೆ; ಇದು ವಿಶ್ವಪ್ರೇಮದ ಸೂತ್ರ. ಅಧಿಕಾರಿ ಪ್ರಜೆಗಳಲ್ಲಿ ದಯೆ, ಪ್ರೇಮ

ಮಮತೆ, ಕಲ್ಯಾಣಗುಣ ಉಳ್ಳವನಾಗಿ, ಸಕಲ ಜೀವಾತ್ಮರಿಗೆ ಲೇಸನೆ ಬಯುಸುವನಾಗಿರಬೇಕು. ಗುರುಹಿರಿಯರಲ್ಲಿ ಭಕ್ತಿಯುಳ್ಳವನು ನಮ್ರ ಅಧಿಕಾರಿಯಾಗಬಲ್ಲ. ಭಕ್ತಿ ಮುಕ್ತಿಗೆ ಮೂಲ. ಮುಖ್ಯ ಸಾಧನ ಆತ್ಮ ಪ್ರಗತಿಗೆ ಸೋಪಾನ. ಅಸಾಧ್ಯವಾದುದೆಲ್ಲವೂ ಭಗವದ್ಭಕ್ತಿಯಿಂದ ಸಾಧ್ಯ. ನಿಷ್ಕಾಮ ಭಕ್ತಿಯಿಂದ ನಂಬಿ ಕರೆದಾಗ ದೇವರು ಪ್ರತ್ಯಕ್ಷನಾಗಿ ಯೋಗ ಕ್ಷೇಮವನ್ನು ಕೇಳಿ ನಿಜ ಸುಖವನ್ನು ನೀಡುತ್ತಾನೆ. ಮೊದ ಮೊದಲು ದೇವರು ವ್ಯಕ್ತಿಯ ಅಂತರಂಗವನ್ನು ಅರಿತು ನಿರೀಕ್ಷಿಸಿ ಪರೀಕ್ಷಿಸುವನು. ಸುವರ್ಣದಂತೆ ಒರೆದು ನೋಡುವನು. ಮಣ್ಣು ಮಾಡುವ, ಅಳ್ಳಾಡಿಸಿ ನೋಡುವ ಚಿನ್ನದಂತೆ ಪರಿಶುದ್ಧ ಹೃದಯ ಕಂಡಾಗ ಶಿವನು ತನ್ನಂತೆ ಮಾಡಿಕೊಳ್ಳುವನು. ಆದ್ದರಿಂದ ಅಧಿಕಾರಿಯಾದವನು ಜನಸೇವೆಯೇ ಈತನ ಸೇವೆಯೆಂದು ತಿಳಿದು ನಡೆಯಬೇಕು ಎಂದು ಅಪ್ಪಣೆ ಕೊಡಿಸಿದರು. ಆ ಅಧಿಕಾರಿಗಳು ಮುಂದೆ ಮಠಗಳ ವಿಚಾರದಲ್ಲಿ ಭಕ್ತಿ ಶ್ರದ್ಧೆಯಿಂದ ನಡೆದುಕೊಂಡರು. ಈ ಮಹಿಮೆ ಈಗಲೂ ಜನ ಶೃತಿಯಲ್ಲಿ ಇರುತ್ತದೆ.

---

## ನುಡಿ ಮುತ್ತುಗಳು

ಗುರುಮೂರ್ತಿ ಸ್ಮರಣೆಯಿಂದಧಿಕ ಧ್ಯಾನಗಳಿಲ್ಲ
ಗುರುಪಾದ ಪೂಜೆಯಿಂದಧಿಕಾರ್ಚನೆಗಳಿಲ್ಲ
ಗುರುವಚನಕಧಿಕ ಮಂತ್ರಮದಿಲ್ಲ ಗುರುವಿನಿಂದಧಿಕವಾಗಿಪ್ಪುದಿಲ್ಲ |
ಗುರುವಿನ ಕಟಾಕ್ಷದಿಂದಧಿಕ ಮೋಕ್ಷಗಳಿಲ್ಲ
ನಿರುತದಿಂ ನಾಸ್ತಿತತ್ತ್ವಂ ಗುರೋಃ ಪರಮೆಂಬ
ಸುರುಚಿರಾಗಮದಿಂದೆ ಗುರುವಧಿಕನಿಂತಪ್ಪಾ-
ಗುರುಕರೋದ್ಭವರಧಿಕರು ||

# ನಾಗರಸನಿಗೆ ಅನುಗ್ರಹ

ಪಂಚಗವಿಮಠವಾಸಂ । ಮಹಾಭಕ್ತಜನಪೋಷಂ ।
ಜ್ಞಾನವೈರಾಗ್ಯಸಂಯುಕ್ತಂ । ವಂದೇ ಗುರು ಫಿರಂಗೀಶಂ॥

ಶಿವಯೋಗಿ ಶ್ರೀ ಫಿರಂಗೀಶ್ವರರ ಅನುಗ್ರಹದಿಂದ ರಾಜರು, ಪಾಳೇಗಾರರು, ಮಂಡಲಾಧಿಪತಿಗಳು ಮತ್ತು ಅನೇಕ ಶಿಷ್ಯರುಗಳು ಉದ್ಧಾರವಾಗಿರುವುದು ಅವರ ಚರಿತ್ರೆಯಿಂದ ತಿಳಿಯಬಹುದು.

ಪೂರ್ವದಲ್ಲಿ ಶ್ರೀ ನಾಗರಸನೆಂಬ ಪಾಳೇಗಾರನು ಕುಣಿಗಲ್ ತಾಲ್ಲೂಕು ಹುಲಿಯೂರು ದುರ್ಗದ ಹೋಬಳಿಯಲ್ಲಿ ಇರುವ ನಾಗರಹೊಲಿಕಟ್ಟೆ ಮುಂತಾದ ಗ್ರಾಮಗಳನ್ನು ಆಳುತ್ತಿದ್ದನೆಂದು ತಿಳಿದುಬಂದಿದೆ. ಆತನಿಗೆ ಬೇಕಾದಷ್ಟು ಐಶ್ವರ್ಯವಿದ್ದಾಗ್ಯೂ ಅನೇಕ ವರ್ಷಗಳು ಪುತ್ರ ಸಂತಾನವೇ ಇಲ್ಲದೆ ದುಃಖಿತನಾಗಿರಲು, ಒಮ್ಮೆ ಆತನ ಪತ್ನಿಯು ತನ್ನ ಪತಿಯೊಡನೆ "ಶ್ರೀ ಗುರು ಫಿರಂಗೀಶ್ವರ ಸ್ವಾಮಿಗಳು ಮಹಾಮಹಿಮರೂ, ಸರ್ವಶಕ್ತರೂ ಆಗಿರುತ್ತಾರೆ. 'ಹರ ಮುನಿದರೆ ಗುರು ಕಾಯುವ' ಎಂದು ಶರಣರ ವಾಣಿಯಿರುತ್ತದೆ. ಗುರುವು ಪರಶಿವನ ಕರುಣೆಯ ಮಾರ್ಗವನ್ನು ತೋರಿಸಿಕೊಡಬಲ್ಲ ಜ್ಞಾನ ದೀವಿಗೆಯಾಗಿರುತ್ತಾನೆ. ಆದ್ದರಿಂದ ನಾವುಗಳು ಅಂಕನಹಳ್ಳಿ ಶ್ರೀ ಗವಿ ಮಠಕ್ಕೆ ಹೋಗಿ, ಗುರುವಿನಲ್ಲಿ ನಮ್ಮ ದುಃಖವನ್ನು ನಿವೇದಿಸಿಕೊಳ್ಳೋಣ" ವೆಂದು ಮಾತನಾಡಿಕೊಂಡು ದಂಪತಿಗಳು ಫಲ, ಪುಷ್ಪಗಳ ಸಮೇತ ಶ್ರೀ ಮಠಕ್ಕೆ ಬಂದು ಪೂಜ್ಯ ಶ್ರೀಗಳವರ ಅಡಿದಾವರೆಗಳಿಗೆರಗಿ, ತಮ್ಮ ದುಃಖವನ್ನು ಭಯ, ಭಕ್ತಿಗಳಿಂದ ಅರಿಕೆಮಾಡಿಕೊಂಡು 'ತಾವೇ ನಮ್ಮನ್ನು ಉದ್ಧಾರ ಮಾಡಬೇಕು, ತಾವೇ ನಮಗೆ ರಕ್ಷಕರು, ಶಿವಸ್ವರೂಪರೇ ನೀವು, ಆದ್ದರಿಂದ ತಾವು ನಮ್ಮನ್ನು ಕಾಪಾಡಬೇಕೆಂದು' ಪ್ರಾರ್ಥಿಸಿದರು.

ಶ್ರೀಗಳು ಸ್ವಲ್ಪಕಾಲ ಧ್ಯಾನ ಮಗ್ನರಾಗಿ, ನಾಗರಸನೆ ? ನೀನು ಈ ಹಿಂದೆ ಗುರುಜಂಗಮರನ್ನು, ಶಿವನನ್ನು ತಾತ್ಸಾರಮಾಡಿ, ಶಿವನ ಆಭರಣವೇ ಆದ ನಾಗಸರ್ಪವನ್ನು ಹಿಂಸಿಸಿರುವೆ. ಆ ದೋಷದಿಂದ ನಿನಗೆ ಸಂತಾನ

ವಾಗಿರುವುದಿಲ್ಲ. ಈ ಸರ್ಪ ದೋಷ ನಿವಾರಣೆಯಾಗಬೇಕು. "ನೀನು ಗೃಹಸ್ಥಾಶ್ರಮ ಧರ್ಮಗಳನ್ನು ತಿಳಿದು ಅದರಂತೆ ನಡೆಯಬೇಕು. ಒಬ್ಬ ವ್ಯಕ್ತಿಯ ಮಹತ್ವವು ಅವನ ಆಧ್ಯಾತ್ಮ ಶಕ್ತಿಯ ವಿಕಾಸದಲ್ಲಿ ಅಡಗಿರುವುದೇ ಹೊರತು ಕೇವಲ ದೈಹಿಕ ಶಕ್ತಿಯಲ್ಲಿ ನೆಲಸಿರುವುದಿಲ್ಲ. ದೈಹಿಕ ಶಕ್ತಿ ಎಷ್ಟೇ ಹೆಚ್ಚಾಗಿದ್ದರೂ ಆಧ್ಯಾತ್ಮ ಶಕ್ತಿಯ ಅವಲಂಬನವಿಲ್ಲದಿದ್ದರೆ ಶೋಭಿಸ ಲಾರದು. ಆತ್ಮ ಶಕ್ತಿ ಇಲ್ಲದ ದೇಹ ಶಕ್ತಿ ಕೇವಲ ಆಸುರಿ ಶಕ್ತಿ. ಆತ್ಮ ಶಕ್ತಿಯುಳ್ಳವನೇ ದೇಹವೆಂಬ ರಥವನ್ನು ವ್ಯವಸ್ಥೆಯಿಂದ ನಡೆಸಬಲ್ಲನು. ಆತ್ಮ ಗುಣಗಳ ವಿಕಾಸವೇ ಆತ್ಮಶಕ್ತಿಯ ಶುಭ ಲಕ್ಷಣವೆನಿಸುತ್ತದೆ. ಆತ್ಮ ವಿಕಾಸದಗುಣಗಳಲ್ಲಿ ತೃಪ್ತಿ, ಶಾಂತಿ, ಸಂತೋಷ, ಸಮಾಧಾನಗಳೇ ಪ್ರಧಾನ ವಾದುವು. ಈ ಗುಣಗಳನ್ನು ಹೊಂದಿರುವ ಮಾನವನೇ ಲೋಕದಲ್ಲಿ ನೆಮ್ಮದಿಯಿಂದ ಬಾಳಬಲ್ಲನು.

ಇವನ್ನು ಮಾನವನು ಅಭ್ಯಾಸ ಬಲದಿಂದ ಸಾಧಿಸಿಕೊಂಡು ಜೀವಿಸ ಬೇಕಾಗಿದೆ. ಇವಿಲ್ಲದ ಜೀವನವು ಕೇವಲ ನೀರಸ ಪುಷ್ಪದಂತೆ ತುಚ್ಛವೇ ಆದೀತು. ಆದರೆ ದೈವೀ ಗುಣಗಳನ್ನು ಜೀವನದಲ್ಲಿ ಹೊಂದಿಸಿಕೊಂಡು ಬಾಳಬೇಕಾದರೆ ಉತ್ತಮ ಮಾರ್ಗದರ್ಶನ ಬೇಕು. ಯಾವಾತನು ಆತ್ಮ ವನ್ನು ನಿರ್ಲಕ್ಷಿಸಿ ಕೇವಲ ಹೊಟ್ಟೆಗಾಗಿಯೇ ದೇಹವನ್ನು ಉಪಯೋಗಿಸು ವನೋ ಅವನ ಜೀವನವು ಪೂರ್ಣ ವಿಕಾಸವನ್ನು ಹೊಂದಲಾರದು. ಹೊರ ಪ್ರಪಂಚದ ವಸ್ತುಗಳಂತೆಯೇ ಆತ್ಮ ವಿಕಾಸಕ್ಕೂ ದೇಹವನ್ನು ಸಮಾನವಾಗಿ ಉಪಯೋಗಿಸುವವನೇ ಜ್ಞಾನಿಯಾಗುವನು. ಸ್ತ್ರೀ ಪುರುಷರಾದಿಯಾಗಿ ಮಾನವ ಕುಲವನ್ನು ಉತ್ತಮ ಮಾರ್ಗದಲ್ಲಿ ನಡೆಸಿ, ನಿಜ ತತ್ವವನ್ನು ಮನ ವರಿಕೆ ಮಾಡಲಿಕ್ಕಾಗಿಯೇ ಶಿವನು ಗುರು ರೂಪದಿಂದ ಲೋಕದಲ್ಲಿ ಅವತರಿಸು ವನು. "ಗುರುವಚನದಿಂದಧಿಕ ಸುಧೆಯುಂಟೆ" ? ಶ್ರೀ ಗುರುವಿನ ಜ್ಞಾನ ಸುಧೆಗಳಿಗೆ ಮಿಗಿಲಾದ ವಚನವಿರುವುದಿಲ್ಲ ! ಅವರ ಜ್ಞಾನಸುಧೆ ಮಾನವ ನನ್ನು ಪುನೀತನನ್ನಾಗಿ ಮಾಡುತ್ತದೆ. ನೀವುಗಳು ಈಗ ಗುರು ಸನ್ನಿಧಿಗೆ ಬಂದು ಗುರುವಿನ ಅನುಗ್ರಹವನ್ನು ಅಪೇಕ್ಷಿಸುತ್ತಿದ್ದೀರಿ. ನಿಮ್ಮಗಳ ಅಪೇಕ್ಷೆ ಈಡೇರಬೇಕಾದರೆ, ನಿಮ್ಮ ಗ್ರಾಮದಲ್ಲಿ ನಾಗ ದೋಷ ಪರಿಹಾರಕ್ಕಾಗಿ ನಾಗ ಪ್ರತಿಷ್ಠೆಯನ್ನು ಕಲ್ಪಶಾಸ್ತ್ರದಂತೆ ಮಾಡಿಸಿ, ಶಿವನ ಅನುಗ್ರಹ ಪ್ರಾಪ್ತ

ವಾಗಲು ಸೋಮೇಶ್ವರ ಲಿಂಗವನ್ನು ಸ್ಥಾಪನೆ ಮಾಡಿಸಬೇಕು. ಆ ಪರಶಿವನಿಗೆ ಸುವರ್ಣ ನಾಗಾಭರಣವನ್ನು ಮಾಡಿಸಿ ಪ್ರತಿ ನಿತ್ಯ ದಂಪತಿಗಳು ಪಂಚಾಮೃತಾದಿ ಅಭಿಷೇಕದಿಂದ ಭಕ್ತಿಯಿಂದ ಅರ್ಚಿಸಿದರೆ ನಿಮಗೆ ಶಿವಕೃಪೆಯಿಂದ ಪುತ್ರಸಂತಾನವಾಗುವುದು ಎಂದು ಹೇಳಿ ದಂಪತಿಗಳನ್ನು ಆಶೀರ್ವದಿಸಿ ಬೀಳ್ಕೊಟ್ಟರು.

ನಾಗರಸನು ಗುರುವಾಕ್ಯದಂತೆ ಮಾಡಲು, ನಾಗರಸನ ಮಡದಿ ಗರ್ಭಿಣಿಯಾಗಿ ನವಮಾಸ ತುಂಬಲು ತೇಜಸ್ವಿಯಾದ ಪುತ್ರನನ್ನು ಪಡೆದರು. ಆ ರಾಜ ದಂಪತಿಗಳು ಶ್ರೀ ಗುರು ಅನುಗ್ರಹದಿಂದ ವಂಶದ ಜ್ಯೋತಿಯನ್ನು ಬೆಳಗಿಸುತ್ತಾ ಸುಖ, ಶಾಂತಿ, ನೆಮ್ಮದಿಯನ್ನು ಪಡೆದು ನಾಡನ್ನು ಧರ್ಮದಿಂದ ಬಹುಕಾಲ ಆಳಿದರು. ಈಗಲೂ ಶ್ರೀಗಳ ಶಿಷ್ಯನಾದ ನಾಗರಸನು ಕಟ್ಟಿಸಿದ ಸೋಮೇಶ್ವರ ದೇವಾಲಯವೂ, ಆತನ ಹೆಸರಿನಲ್ಲಿಯೇ ನಿರ್ಮಿತವಾದ ನಗರ ಹೂಲಿಕಟ್ಟಿ ಗ್ರಾಮವು ಇರುತ್ತದೆ. ಹೀಗೆ ಪೂಜ್ಯಪಾದರು ಅನೇಕ ಶಿಷ್ಯರ ಇಷ್ಟಾರ್ಥಗಳನ್ನು ಅನುಗ್ರಹಿಸಿ ಅವರನ್ನು ಧರ್ಮ ಮಾರ್ಗದಲ್ಲಿ ನಡೆಸಿರುತ್ತಾರೆ. ಈ ನಾಗರಸನ ಆಳ್ವಿಕೆ ೧೭ ನೇ ಶತಮಾನದ ಮಧ್ಯಭಾಗವೆಂದು ಆ ಸ್ಥಳದ ಜನಶ್ರುತಿಯಿಂದ ತಿಳಿದುಬಂದಿರುತ್ತದೆ ಈತನು ಪೂಜ್ಯರಿಗೆ ಶಿವನ ಪೂಜೆಗೆ ಯೋಗ್ಯವಾದ ರಜತ ಪಾತ್ರೆಗಳನ್ನು ಮಾಡಿಸಿ ಅರ್ಪಿಸಿದ್ದನು

## ಶಿವಯೋಗ

ಕೀಟೋ ಭ್ರಮರ ಯೋಗೇನ ಭ್ರಮರೋ ಭವತಿಧ್ರುವಂ ।
ಮಾನವಃ ಶಿವಯೋಗೇನ ಶಿವೋ ಭವತಿ ಕೇವಲಂ ॥

ಕೀಟವು ಭ್ರಮರದ ಸಂಸ್ಕಾರದಿಂದ ಭ್ರಮರವೇ ಆಗುವಂತೆ, ಮಾನವನು ಶಿವಯೋಗದ ಆಚರಣೆಯಿಂದ ಶಿವನೇ ಆಗುವನು.

ಪ್ರತಿಯೊಬ್ಬ ಜೀವಾತ್ಮನು ಶಿವಸ್ವರೂಪವನ್ನು ಹೊಂದಬೇಕಾದರೆ, ಯೋಗ ಸಾಧನೆ ಅತ್ಯಾವಶ್ಯಕ. ಎಲ್ಲಾ ಯೋಗಗಳಲ್ಲಿ ಅತಿ ಮುಖ್ಯವಾದದ್ದು ಶಿವಯೋಗ. ಶಿವಯೋಗದ ಹೃದಯವೇ ಷಟ್‌ಸ್ಥಲಗಳೆಂದು ಪ್ರಸಿದ್ಧವಾಗಿರುವುವು. ಈ ಷಟ್‌ಸ್ಥಲ ಜ್ಞಾನವೇ ಮೋಕ್ಷಕ್ಕೆ ಮೂಲಭೂತ

ನಾಗಿರುವುದು. ವೀರಶೈವ ಸಿದ್ಧಾಂತದಲ್ಲಿ ಪರಶಿವ ಬ್ರಹ್ಮವು "ಸ್ಥಲ"ವೆಂದು ಕೇಳಿಸಿಕೊಳ್ಳುವುದು.

ಸ್ಥೀಯತೇ ಲೀಯತೆ ಯತ್ರ ಜಗದೇತಚ್ಚರಾಚರಂ। *
ತದ್ಬ್ರಹ್ಮ ಸ್ಥಲ ಮಿತ್ಯುಕ್ತಂ ಸ್ಥಲತತ್ವ ವಿಶಾರದೈಃ ॥

ಎಂಬ ಪ್ರಮಾಣದಂತೆ ಚರಾಚರಾತ್ಮಕವಾದೀ ಜಗತ್ತು ಯಾವುದರಲ್ಲಿ ಉತ್ಪತ್ತಿ ಲಯವನ್ನು ಹೊಂದುವುದೋ, ಆ ಬ್ರಹ್ಮವು "ಸ್ಥಲ" ವೆಂದು ಹೇಳಿಸಿಕೊಳ್ಳುವುದು.* ಆ ಸ್ಥಲರೂಪ ಪರಶಿವ ಬ್ರಹ್ಮವು ಸ್ವಲೀಲೆಯಿಂದ ಅಂಗ (ಜೀವ), ಲಿಂಗ (ಶಿವ) ಎಂದು ಎರಡು ಪ್ರಕಾರವಾಗುವುದು. ಚೈತನ್ಯ ರೂಪ ಜೀವನೇ "ಅಂಗ"ವೆನಿಸುವನು. ಮಹಾ ಚೈತನ್ಯರೂಪನಾದ ಪರ ಶಿವನೇ "ಲಿಂಗ" ವೆನಿಸುವನು. ಲಿಂಗಾಂಗ ಪದವಾಚ್ಯರಾದ ಶಿವಜೀವರ ಐಕ್ಯವೇ "ಶಿವಲಿಂಗಾಂಗ ಸಾಮರಸ್ಯ" ವೆನಿಸುವುದು. ಷಟ್‌ಸ್ಥಲಗಳ ಮಹಾತ್ಮೆಯನ್ನು ಹೀಗೆ ವಿವರಿಸಿರುವರು.

---

*ಸಿದ್ಧಾಂತ ಶಿಖಾಮಣಿ.

*ಈ "ಸ್ಥಲ" ರೂಪ ಪರಶಿವ ಬ್ರಹ್ಮನು ಸ್ವಲೀಲೆಯಿಂದ ಅಂಗ ಸ್ಥಲ-ಲಿಂಗ ಸ್ಥಲವೆಂದು ಎರಡು ಪ್ರಕಾರವಾಗಿರುವುದು. ಚಿತ್ತ ಶಕ್ತಿ ವಿಶಿಷ್ಟ ಜೀವನೇ ಅಂಗಪದ ವಾಚ್ಯ ನೆನಿಸುವನು. ಚಿಚ್ಛಕ್ತಿ ವಿಶಿಷ್ಟ ಪರಶಿವನೇ ಲಿಂಗ ಪದ ವಾಚ್ಯನೆನಿಸುವನು. ಲಿಂಗವು ಭಕ್ತಾನುಗ್ರಹಕ್ಕಾಗಿ ಸ್ಥೂಲ-ಸೂಕ್ಷ್ಮ ಕಾರಣ ನಾಮಕ ಶರೀರ ಸ್ಥಾನಭೇದದಿಂದ ಇಷ್ಟಲಿಂಗ ಪ್ರಾಣಲಿಂಗ-ಭಾವಲಿಂಗವೆಂದು ಮೂರು ಪ್ರಕಾರವಾಗುವುದು. ಅಂಗವಾದರೂ ತ್ಯಾಗಾಂಗ-ಭೋಗಾಂಗ-ಯೋಗಾಂಗವೆಂದು ಮೂರು ಪ್ರಕಾರವಾಗುವುದು. ಇಷ್ಟ ಲಿಂಗವು-ಆಚಾರ ಲಿಂಗ ಗುರುಲಿಂಗವೆಂದೂ, ಪ್ರಾಣಲಿಂಗವು-ಶಿವಲಿಂಗ-ಚರಲಿಂಗವೆಂದೂ, ಭಾವಲಿಂಗವು-ಪ್ರಸಾದಲಿಂಗ-ಮಹಾಲಿಂಗವೆಂದೂ ಆರು ಪ್ರಕಾರವಾಗುವುವು. ಇದರಂತೆ ತ್ಯಾಗಾಂಗವು-ಭಕ್ತ-ಮಾಹೇಶ್ವರನೆಂದೂ, ಭೋಗಾಂಗವು-ಪ್ರಸಾದಿ-ಪ್ರಾಣಲಿಂಗಿಯೆಂದೂ, ಯೋಗಾಂಗವು-ಶರಣ-ಐಕ್ಯನೆಂದೂ ಆರು ಪ್ರಕಾರವಾಗುವುವು. ಅಂಗಸ್ಥಲವು ಅವಾಂತರ ಭೇದದಿಂದ ೪೪ ಪ್ರಕಾರವಾಗಿಯೂ, ಲಿಂಗಸ್ಥಲವು ೫೭ ಪ್ರಕಾರವಾಗಿಯೂ ಆಗುವುವು. ಈ ಎರಡು ಸ್ಥಲಗಳೂ ಸೇರಿ ೧೦೧ ಸ್ಥಲಗಳಾಗುವುವು. ಏಕೋತ್ತರ ಶತಸ್ಥಲಾತ್ಮಕವಾದೀ ಲಿಂಗಾಂಗ ಸಾಮರಸ್ಯ ಜ್ಞಾನವೇ ವೀರಶೈವ ಸಿದ್ಧಾಂತದಲ್ಲಿ ಮೋಕ್ಷಕ್ಕೆ ಮೂಲಕಾರಣವಾಗಿರುವುದು,

ಶಿವೇಭಕ್ತಸ್ಸಮುತ್ಪನ್ನಾಯಸ್ಯಾಸೌಭಕ್ತ ಉಚ್ಯತೇ। *
ತಸ್ಯಾನುಷ್ಠೇಯಧರ್ಮಾಣಾಮುಕ್ತಿರ್ಭಕ್ತಸ್ಥಲಂ ಮತಂ ।

ಕೇವಲಂ ಸಹಜೇದಾನೇ ನಿಷ್ಣಾತಃ ಶಿವತತ್ಪರಃ ।
ಬ್ರಹ್ಮಾದಿಸ್ಥಾನವಿಮುಖೋಭಕ್ತೋಮಹೇಶ್ವರಃ ಸ್ಮೃತಃ ।

ಮನಃ ಪ್ರಸಾದ ಸಿಧ್ಯರ್ಥಂ ನಿರ್ಮಲಜ್ಞಾನ ಕಾರಣಂ ।
ಶಿವ ಪ್ರಸಾದಂ ಸ್ವೀಕುರ್ವನ್ ಪ್ರಸಾದೀತ್ಯೇಷ ಕಥ್ಯತೇ ॥

ಲಿಂಗಂ ಚಿದಾತ್ಮಕಂ ಬ್ರಹ್ಮತಚ್ಛಕ್ತಿಃ ಪ್ರಾಣರೂಪಿಣೀ ।
ತದ್ರೂಪಲಿಂಗ ವಿಜ್ಞಾನೀ ಪ್ರಾಣಲಿಂಗೀತಿಕಥ್ಯತೇ ॥

ಸತೀವ ರಮತೇಯಸ್ತು ಶಿವೇ ಶಕ್ತ್ಯಂ ವಿಭಾವಯನ್ ।
ತದನ್ಯ ವಿಮುಖಃ ಸೋಽಯಂ ಜ್ಞಾತಃ ಶರಣನಾಮವಾನ್ ॥

ಪ್ರಾಣಲಿಂಗಾದಿಯೋಗೇನ ಸುಖಾತಿಶಯಮೀಯಿವಾನ್ ।
ಶರಣಾಖ್ಯಃ ಶಿವೇನೈಕಃ ಭಾವನಾದೈಕ್ಯವಾನ್ ಭವೇತ್ ॥

ಯಾವನಿಗೆ ನಿಜವಾದ ಶಿವಭಕ್ತಿಯು ಉತ್ಪನ್ನವಾಗಿರುತ್ತದೆಯೋ, ಅವನು "ಶಿವಭಕ್ತ"ನೆನಿಸುವನು. ಸಹಜವಾದ ದಾನದಲ್ಲಿ ನಿಷ್ಣಾತನೂ, ಶಿವಾಸಕ್ತನೂ, ಬ್ರಹ್ಮಾದಿಸ್ಥಾನ ವಿಮುಖನೂ ಆದವನೇ "ಮಹೇಶ್ವರ" ನೆನಿಸುವನು. ಈ ಮಹೇಶ್ವರನು ತನ್ನ ಮನಃ ಪ್ರಸನ್ನತೆಗಾಗಿ ನಿರ್ಮಲಜ್ಞಾನ ಕಾರಣವಾದ ಶಿವಪ್ರಸಾದವನ್ನು ಸ್ವೀಕರಿಸುವುದರಿಂದ "ಶಿವಪ್ರಸಾದಿ" ಯೆನಿಸುವನು. ಪರಶಿವ ಬ್ರಹ್ಮವು ಚಿತ್ಸ್ವರೂಪವೆಂದೂ, ಆ ಪರಶಿವ ಬ್ರಹ್ಮದ ಶಕ್ತಿಯು ಪ್ರಾಣಸ್ವರೂಪವೆಂದೂ, ಲಿಂಗವು ಈ ಎರಡರ ಸ್ವರೂಪ ವಾಗಿರುವುದೆಂದೂ ತಿಳಿದು ಪ್ರಸಾದಿಯೇ "ಪ್ರಾಣಲಿಂಗಿ"ಯೆನಿಸುವನು. ತನ್ನ ಪತಿಯಲ್ಲಿ ಅನುರಕ್ತಳಾದ ಪತಿವ್ರತಾ ಸ್ತ್ರೀಯಂತೆ, ಯಾವನು ಶಿವನ ವಿಷಯದಲ್ಲಿ ಅನುರಕ್ತನಾಗಿ ಅವನನ್ನು ಭಾವಿಸಿ ಅನ್ಯದೇವತಾದಿಗಳಲ್ಲಿ ವಿಮುಖನಾಗುವನೋ ಅವನು "ಶರಣ" ನೆನಿಸುವನು. ಈ ಶರಣನು ಪ್ರಾಣಲಿಂಗಾದಿಯೋಗದಿಂದ ಸುಖಾತಿಶಯವನ್ನು ಹೊಂದಿ "ಶಿವೋಽಹಂ" ಭಾವನೆಯಿಂದ ಶಿವೈಕ್ಯವನ್ನು ಹೊಂದುವುದರಿಂದ "ಐಕ್ಯ"ನೆನಿಸುವನು.

* ಸಿದ್ಧಾಂತ ಶಿಖಾಮಣಿ—ಪು. ೪೯

ತೃಪ್ತಿ ಪ್ರಸಾದವನ್ನು ಭೋಗಿಸಿದವನಿಗೆ ಏಕೀಭಾವವಿಲ್ಲದೆ ಬೇರೆ ಯಾವುದು ಸುಖವಿದ್ದೀತು? ಮಹಾಲಿಂಗದಲ್ಲಿ ಏಕೀಭೂತನಾದವನಿಗೆ ಅಂಗಭಾವದ ವ್ಯಕ್ತಿತ್ವವೆಲ್ಲಿ ಉಳಿದಿದ್ದೀತು? ತನ್ನ ಪ್ರತ್ಯೇಕತೆಗೆ ಇನ್ನು ಅವಕಾಶವೇ ಇರುವುದಿಲ್ಲ. ಅರ್ಪಣದ ಅವಶ್ಯಕತೆಯೂ ಇರುವುದಿಲ್ಲ. ಅರ್ಚನೆಯ ಅಭಿಲಾಷೆಯೂ ಇರುವುದಿಲ್ಲ. ಪೂಜ್ಯ ಪೂಜಕ ಲೀಲೆಯೂ ಪೂರೈಸಿತು.” ‘ನೀನೆನ್ನೆ, ನಾನೆನ್ನೆ, ಲಿಂಗವೆನ್ನೆ, ಲಿಂಗೈಕ್ಯವೆನ್ನೆ’ ಎಂದು ವಚನಕಾರರ ಅಭಿಪ್ರಾಯವಿರುತ್ತದೆ. “ಬ್ರಹ್ಮ ರಂಧ್ರದಲ್ಲಿಪ್ಪನಾದ ಚೈತನ್ಯವಪ್ಪ ಪರಮ ಚಿತ್ಕಳೆಯೇ ಭಾವ-ಮನ-ಕರದಲ್ಲಿ ಶ್ರೀಗುರು ತಂದು ಸಾಹಿತ್ಯವ ಮಾಡಿದವನಾಗಿ, ಭಾವದಲ್ಲಿ ಸತ್‌ಸ್ವರೂಪವಪ್ಪ ಇಷ್ಟಲಿಂಗವೆಂದೆನಿಸಿ, ಒಂದೇ ವಸ್ತು ತನು-ಮನ-ಭಾವಗಳಲ್ಲಿ ಇಷ್ಟ ಪ್ರಾಣ ಭಾವವಾದ-ಭೇದವನರಿಯದೆ ಇಷ್ಟ ಲಿಂಗದೃಷ್ಟಿಯಿಂದ ಗ್ರಹಿಸಿ, ಪ್ರಾಣಲಿಂಗವ ಮನಜ್ಞಾನದಿಂದ ಗ್ರಹಿಸಿ ತೃಪ್ತಿ-ಲಿಂಗವ ಭಾವಜ್ಞಾನದಿಂದ ಗ್ರಹಿಸಿ ಈ ಲಿಂಗತ್ರಯವಿಡಿದು ಆಚರಿಸಿ, ಲಿಂಗದೊಡಗೂಡಿ, ಲಿಂಗವೇ ತಾನೇ ತಾನಾಗಿ ವಿರಾಜಿಸುವುದೇ ಶಿವಯೋಗ. ನೋಡಾ ಮಹಾಲಿಂಗ ಗುರು ಸಿದ್ಧೇಶ್ವರ ಪ್ರಭುವೇ” ಎಂಬುದಾಗಿ ಶಿವಯೋಗದ ಸಂಪೂರ್ಣ ವಿವರಣೆಯನ್ನು ಶ್ರೀಗುರು ಫಿರಂಗೀಶ್ವರರು ಸ್ಪಷ್ಟಪಡಿಸಿದ್ದಾರೆ. ಬಾಹ್ಯ ವ್ಯವಹಾರವನ್ನು ಸಂಪೂರ್ಣ ಮರೆತು, ತನ್ನ ಹೃದಯಕಮಲವನ್ನು ಅರಳಿಸಿಕೊಂಡು, ಜ್ಞಾನತೇಜದ ಇಷ್ಟಲಿಂಗಾನುಸಂಧಾನದಲ್ಲಿ ಬೆರೆತರೆ ಶಿವಯೋಗಸಾಧನೆಯ ಸಾಫಲ್ಯ ದೊರಕುವುದು.

ಚಿತ್ತವೃತ್ತಿ ಸಮಾಲೀನ ಜಗತಃ ಶಿವಯೋಗಿನಃ । 1
ಶಿವಾನಂದ ಪರಿಸ್ಫೂರ್ತಿರ್ಮುಕ್ತಿ ರಿತ್ಯಭಿಧೀಯತೇ ॥

ತನ್ನ ಚಿತ್ತವೃತ್ತಿಯಲ್ಲಿ ಸಮಸ್ತ ಪ್ರಪಂಚವನ್ನು ಅಡಗಿಸಿಕೊಂಡು, ಶಿವಯೋಗಿಗೆ ಶಿವಾನಂದದ ಪರಿಸ್ಫುರಣವೇ ಮುಕ್ತಿಯೆನಿಸುವುದು. ಅರ್ಥಾತ್ ತಾನೇ ಶಿವರೂಪವನ್ನು ಹೊಂದುವನು ಎಂದು ನಿರೂಪಿಸುವರು.

1 ಶಿವಸಿದ್ಧಾಂತ ಶಿಖಾಮಣಿ ಪು-೧೪-೧೫

## ಶ್ರೀಗಳ ಯೋಗಸಮಾಧಿ

ಗುರುದೇವೋ ಮಹಾದೇವೋ ಗುರುದೇವಸ್ಸದಾ ಶಿವಃ ।
ಗುರುದ್ದೈವಾತ್ಪರಂ ನಾಸ್ತಿ ತಸ್ಮೈ ಶ್ರೀ ಗುರುವೇ ನಮಃ ॥

ಗುರುವಿನ ಮಹಿಮೆಯನ್ನೂ, ಅವರ ಉಪದೇಶವನ್ನೂ, ನಾಡಿನ ಜನತೆಗೆ ಪರಿಚಯ ಮಾಡಿಕೊಟ್ಟು, ಆ ಮೂಲಕ ಜನತೆಯ ಕಲ್ಯಾಣವನ್ನು ಸಾಧಿಸಿ, ಯೋಗಸಮಾಧಿಯಲ್ಲಿ ಗುಪ್ತವಾಗಿ ನೆಲಸಿರುವ ಶ್ರೀ ಗುರು ಫಿರಂಗೀಶ್ವರರ ದಿವ್ಯ ಪ್ರತಿಭೆಯನ್ನು ಭಕ್ತರು ತಿಳಿದು, ಸುಖ ಶಾಂತಿಗಳನ್ನು ಪಡೆಯಲೆಂಬ ಮಹದಾಕಾಂಕ್ಷೆಯಿಂದ ಆ ಸದ್ಗುರುವೇ ನನ್ನ ಮನಸ್ಸಿನಲ್ಲಿ ಕುಳಿತು ಅವರ ಆಧ್ಯಾತ್ಮ ಜೀವನದ ದಿವ್ಯ ರಹಸ್ಯವನ್ನು ಹೊರಗೆಡಹುತ್ತಿರುವರು. ಆದರೂ ನಾನು ಆವರ ದಿವ್ಯ ಮಹಿಮೆಯನ್ನು ನನಗೆ ಗೋಚರಿಸಿದ ರೀತಿಯಲ್ಲಿ ಭಕ್ತ ಸಮೂಹದ ಮುಂದೆ ಇಟ್ಟಿರುವೆ. ವಿಶಾಲವಾದ ಶ್ರೀಗಳ ಆಧ್ಯಾತ್ಮಿಕ ಜೀವನದ ಸಿದ್ಧಾಂತವನ್ನು ಜನಸಾಮಾನ್ಯರಿಗೆ ಅರಿವು ಮಾಡಲು ಪೂಜ್ಯರ ಮಹಿಮೆಯನ್ನು ಹಿಂದೆ ವಿವರಿಸಲಾಗಿದೆ. ಶಿವಯೋಗ ಸಂಪನ್ನರೂ, ಶಿವ ತತ್ವಾನುಭವಿಗಳೂ, ಸಿದ್ಧಪುರುಷರೂ ಆದ ಶ್ರೀಗುರು ಫಿರಂಗೀಶ್ವರರು, ಶಿವ ಜ್ಞಾನ, ಶಿವಭಕ್ತಿ, ಶಿವಧ್ಯಾನ, ಶಿವವ್ರತ, ಶಿವಾರ್ಚನೆ ಮೊದಲಾದ ಐದು ಶಿವಯೋಗ ಸಾಧನೆಗಳನ್ನು ಅನುಷ್ಠಾನ ಮಾಡುತ್ತ ಜೀವಿತ ಕಾಲದಲ್ಲಿಯೇ ಮನೋ ನೇತ್ರದಿಂದ ತನ್ನ ಹೃದಯದ ಗುಹೇಶ್ವರನನ್ನು ಸಾಕ್ಷಾತ್ಕರಿಸಿಕೊಂಡು, ಜನರನ್ನು ಶಿವಯೋಗದ ಕಡೆಗೆ ತಿರುಗಿಸಿ, ನಿರಂತರವೂ ಲೋಕ ಕಲ್ಯಾಣವಾಗಲೆಂಬ ಭಾವನೆಯಿಂದ ತಾವು ಯೋಗ ಸಮಾಧಿಯಲ್ಲಿರುವರು. ಈ ಪರಂಪರೆ ಕರ್ನಾಟಕದಲ್ಲಿ ಹಿಂದಿನಿಂದಲೂ ರೂಢಿಯಲ್ಲಿ ಬಂದಿರುತ್ತದೆ. ಹೀಗೆ ಯೋಗ ಸಮಾಧಿಯಲ್ಲಿ ಇರುವ ಶಿವಯೋಗಿಗಳು ಶಿವಯೋಗ ಸಾಮ್ರಾಜ್ಯದ ನಿತ್ಯಸುಖವನ್ನು ಅನುಭವಿಸುತ್ತಲೇ ಭಕ್ತರ ಇಷ್ಟಾರ್ಥಗಳನ್ನು ಅನುಗ್ರಹಿಸಲು ಜಾಗೃತರಾಗಿರುವರೆಂದು ನಮ್ಮಗಳಿಗೆ ನಂಬಿಕೆಯಿರುತ್ತದೆ. ಪ್ರಸ್ತುತ ತುಮಕೂರು ಜಿಲ್ಲೆಯ ಎಡೆಯೂರು ಕ್ಷೇತ್ರದ ಶ್ರೀ ಸಿದ್ಧಲಿಂಗೇಶ್ವರರು ಶಿವಯೋಗಿಗಳೂ, ಪರಮ ವಿರಕ್ತರೂ ಆಗಿ ಇಂದಿಗೂ ಸಮಾಧಿಯಲ್ಲಿ ನಿತ್ಯಾನಂದವನ್ನು ಅನುಭವಿಸುತ್ತ ಭಕ್ತರ ರಕ್ಷಣೆಯ ಕಾರ್ಯದಲ್ಲಿ ಜಾಗೃತರಾಗಿರುವುದು ಲೋಕ ಪ್ರಸಿದ್ಧವಾಗಿರುತ್ತದೆ. ಹಾಗೂ, ಇದೇ ತಾಲ್ಲೂಕು

ಶ್ರೀ ಬೆಟ್ಟಹಳ್ಳಿ ಮಠದ ಪರಮ ತಪೋ ನಿಧಿಗಳಾದ ಶ್ರೀ ಗುರು ಉರಿ ಲಿಂಗೇಶ್ವರ ಮಹಾಸ್ವಾಮಿಗಳು ತಮ್ಮ ಆತ್ಮಶಕ್ತಿಯಿಂದ ಪಾಳೇಗಾರರಿಗೂ, ಭಕ್ತಿಯುಳ್ಳ ಶಿಷ್ಯರಿಗೂ ಉತ್ತಮ ಮಾರ್ಗದರ್ಶನ ನೀಡಿ, ಲೋಕಕಲ್ಯಾಣ ವನ್ನು ಬಯಸಿ, ತಾವು ಕಂಡ ಶಿವಾನಂದ ವೈಭವವನ್ನು ಅನುಭವಿಸುತ್ತಾ ಯೋಗ ಸಮಾಧಿಯಲ್ಲಿ ಕುಳಿತು, ಇಂದಿಗೂ ಜನ ಜಾಗೃತಿಯನ್ನುಂಟು ಮಾಡುತ್ತ ಮಹಾಮಹಿಮರೆಂದು ಪ್ರಸಿದ್ಧರಾಗಿರುವುದು ಎಲ್ಲರಿಗೂ ತಿಳಿದ ವಿಷಯವಾಗಿರುತ್ತದೆ. ಈ ಮಹಾಮಹಿಮರು ಎಡೆಯೂರು ಸಿದ್ಧಲಿಂಗೇ ಶ್ವರರಿಗಿಂತ ಪ್ರಾಚೀನರೆಂದು ವಿದ್ವಾಂಸರ ಅಭಿಪ್ರಾಯವಿರುತ್ತದೆ. ಮೈಸೂರು ರಾಜ್ಯದ ಹೈಕೋರ್ಟಿನಲ್ಲಿ ಇತ್ಯರ್ಥವಾಗದ ಅನೇಕ ಕೇಸುಗಳು ಶ್ರೀಗಳ ಸನ್ನಿಧಿಯಲ್ಲಿ ಇತ್ಯರ್ಥವಾಗುತ್ತಿದ್ದುವು ಎಂದು ಜನ ಶೃತಿಯಿರುತ್ತದೆ. ಈ ಕಾರಣಗಳಿಂದ ಶ್ರೀ ಮಠಕ್ಕೆ ಎಲ್ಲಾ ವರ್ಗದ ಶಿಷ್ಯರೂ ಇರುತ್ತಾರೆ. ಪೂಜ್ಯರ ಪ್ರತಿಭೆ ಎಲ್ಲಾ ಕಡೆ ಪ್ರಚಾರದಲ್ಲಿ ಇರುತ್ತದೆ. ಇವರಂತೆ ಮೈಸೂರು ಜಿಲ್ಲೆ ಮಹದೇಶ್ವರನ ಬೆಟ್ಟದಲ್ಲಿ ಬಾಲಯೋಗಿಗಳಾದ ಶ್ರೀ ಮಹದೇಶ್ವರರು ಒಮ್ಮೆ ಸೀಗೆ ಬೇಲಿಯೊಳಗೆ ಯೋಗದಲ್ಲಿ ಕುಳಿತು ಶಿವಾನಂದದಲ್ಲಿ ಲೀನನಾಗಿರಲು ಬೇಡನೊಬ್ಬನು ತಿಳಿಯದೆ ಆ ಸೀಗೆ ಬೇಲಿಯನ್ನು ಕಡಿದನು. ಸಮಾಧಿ ಯೋಗದಲ್ಲಿದ್ದ ಶ್ರೀ ಸ್ವಾಮಿಗಳ ಶಿರಸ್ಸಿಗೆ ಕತ್ತಿಯ ಏಟು ತಗಲಿ ರಕ್ತವು ಧಾರಾಕಾರವಾಗಿ ಸುರಿಯಲು ಕೂಡಲೇ ಮಹಾಮಹಿಮರು ತಮ್ಮ ದಿವ್ಯ ಶಕ್ತಿಯಿಂದ ತಾವು ಕುಳಿತಿದ್ದ ಸ್ಥಳದಲ್ಲಿ 'ಶಿವಲಿಂಗವಾಗಿ' ಪರಿಣಮಿಸಿದರೆಂದೂ ಆ ಲಿಂಗದ ಅಗ್ರಭಾಗದಲ್ಲಿ ಇಂದಿಗೂ ಸ್ವಲ್ಪ ಕೆತ್ತಿರುವುದು ಕಾಣುತ್ತದೆ. ಹಿಂದೆ ಬೇಡನ ಏಟಿನಿಂದ ತಲೆಯಲ್ಲಿ ಆಗಿದ್ದ ಗಾಯದ ಗುರುತು ಎಂಬುದಾಗಿ ಸ್ಥಳ ಪುರಾಣವೂ, ಅರ್ಚಕರು ಹೇಳುವುದು ನಂಬಲರ್ಹವಾಗಿರುತ್ತದೆ. ಆ ಲಿಂಗವನ್ನೇ ಮಹದೇಶ್ವರರೆಂದು ಪೂಜಿಸುತ್ತಿರುವುದು ಜಗತ್ ಪ್ರಸಿದ್ಧಿಯಾಗಿ ರುತ್ತದೆ. ಹೀಗೆ ಚಿಕ್ಕನಾಯಕನಹಳ್ಳಿ ತಾಲ್ಲೋಕು ಶ್ರೀ ಕುಪ್ಪೂರು ಗದ್ದಿಗೆ (ಮಠ) ಯಲ್ಲಿ ಶ್ರೀ ಜಗದ್ಗುರು ರೇಣುಕಾಚಾರ್ಯರ ಪರಂಪರೆಯ ಶ್ರೀ ಮರುಳ ಸಿದ್ಧೇಶ್ವರರು ಇಂದಿಗೂ ಜನತೆಯ ಕಲ್ಯಾಣಕ್ಕಾಗಿ ಯೋಗ ಸಮಾಧಿಯಲ್ಲಿ ಕುಳಿತು ಶಿವನ ನಿಜ ಸುಖವನ್ನು ಅನುಭವಿಸುತ್ತಲೇ ತಮ್ಮ ತಪೋ ತೇಜದಿಂದ ಜನರನ್ನು ಧರ್ಮಜಾಗೃತರನ್ನಾಗಿ ಮಾಡುತ್ತಿರುವುದು

ಎಲ್ಲರಿಗೂ ತಿಳಿದ ವಿಷಯವೇ ಆಗಿರುತ್ತದೆ. ಈ ತಪೋಧನರುಗಳ ಭೌತಿಕ ದೇಹ ನಮಗೆ ಕಾಣದಾದರೂ, ಅವರುಗಳು ಯೋಗಸಮಾಧಿಗೆ ಹೋಗುವಾಗ ನಾಡಿನ ಜನತೆ ಧರ್ಮ ಮಾರ್ಗದಲ್ಲಿ ನಡೆದು ಇಷ್ಟಾರ್ಥಗಳನ್ನು ಪಡೆಯಲು ಮತ್ತು ಅವರುಗಳು ಶ್ರೀ ಗುರುವನ್ನು ನಂಬಿ ಕರೆದಾಗ ಅವರುಗಳಿಗೆ ಗೋಚರವಾಗಲಿಕ್ಕಾಗಿ, ಅವರೇ ತಮ್ಮ ಶಕ್ತಿಯ ಪ್ರತೀಕವಾಗಿ ವಿಭೂತಿಯ ಗಟ್ಟಿಯನ್ನು ಅನುಗ್ರಹಿಸಿರುವರು. ಅದನ್ನು ಕರ್ಪೂರದ ಕಂತೆಯೊಡನೆ ಲಿಂಗಾಕಾರವಾಗಿ ಮಾಡಿ ಯೋಗ ಸಮಾಧಿಯ ಮೇಲಿರಿಸಿ ಭಕ್ತಿಯಿಂದ ಪೂಜಿಸುವ ಪದ್ಧತಿ ರೂಢಿಯಲ್ಲಿರುತ್ತದೆ. ಮತ್ತೆ ಕೆಲವು ಕಡೆ ಶಿವಯೋಗಿಗಳು ಶಿವಲಿಂಗದಲ್ಲಿ ಲೀನರಾಗಿರುವುದರಿಂದ, ಶಿವನ ಮೂರ್ತಿಯಾದ ಶಿವಲಿಂಗವನ್ನು, ಕೆಲವು ಕಡೆ ಲಿಂಗ ಮತ್ತು ವೃಷಭವನ್ನು ಯೋಗ ಸಮಾಧಿಯ ಮೇಲಿಟ್ಟು ಭಕ್ತರು ಅರ್ಚಿಸುವುದು ಸಾಮಾನ್ಯವಾಗಿ ಎಲ್ಲಾ ಕಡೆ ಕಂಡುಬರುತ್ತವೆ. ಇದಾದರೂ ಪ್ರತಿಷ್ಠಿತ ಲಿಂಗ ಅಥವಾ ಮೂರ್ತಿಯೆನಿಸದೆ ಯೋಗಸಮಾಧಿಯಲ್ಲಿರುವ ಶಿವಯೋಗೀಶ್ವರನನ್ನೇ ಗುರುತಿಸುವ ಸಾಧನವಾಗಿರುತ್ತದೆ. ಒಳಗೆ ನೆಲಸಿರುವ ಶಿವಯೋಗಿಗಳ ಚೈತನ್ಯದ ಪ್ರತಿಭೆಯು ಸಮಾಧಿಯ ಮೇಲಿರುವ ಶಿವಲಿಂಗದಲ್ಲೂ ಎದ್ದು ಕಾಣುತ್ತಿರುವುದು ಯೋಗ ಸಮಾಧಿಗಳ ವೈಶಿಷ್ಟ್ಯವೆನಿಸಿದೆ.

ಅಂಕನಹಳ್ಳಿ ಶ್ರೀ ಗವಿಮಠದ ಮಹಾಪೀಠದಲ್ಲಿ ಶಿವಯೋಗಿ ಶ್ರೀ ಗುರು ಫಿರಂಗೀಶ್ವರರು ತಪಃಶಕ್ತಿಯಿಂದ ತಮ್ಮ ಭೌತಿಕ ದೇಹವನ್ನು ಸಚ್ಚಿದಾನಂದ ರೂಪವಾಗಿ ಜೀವಿತ ಕಾಲದಲ್ಲಿಯೇ ಪರಿವರ್ತಿಸಿಕೊಂಡು, ಸಜೀವ ಯೋಗ ಸಮಾಧಿಯಲ್ಲಿ ನೆಲಸಿ ಶಿಷ್ಯರನ್ನು ಅನುಗ್ರಹಿಸುತ್ತಿರುವರು. ಈ ಕಾರಣದಿಂದಲೇ ಭಕ್ತರು ಗುರುವನ್ನು ನಂಬಿ ತಮ್ಮ ತಮ್ಮ ಅಭೀಷ್ಟಗಳನ್ನು ಪಡೆದು ಧನ್ಯರಾಗುತ್ತಿರುತ್ತಾರೆ. ಶ್ರೀ ಗುರುವು ಇಂದಿಗೂ ಶ್ರೀ ಮಠದ ಎಲ್ಲಾ ಕಾರ್ಯಗಳನ್ನು ಹಿನ್ನೆಲೆಯಲ್ಲಿ ನಿಂತು ಮಾಡಿಸಿಕೊಡುತ್ತಿರುವುದು ಎಲ್ಲಾ ಶಿಷ್ಯರೂ ತಿಳಿದಿರುತ್ತಾರೆ. ಅನೇಕ ವೇಳೆ ಗುರುಭಕ್ತನಿಷ್ಠರಾದವರಿಗೆ ಗೋಚರಿಸಿರುವರು. ಹೀಗೆ ಗುರುಗಳ ಯೋಗ ಸಮಾಧಿಯು, ಭಕ್ತರ ಅಭೀಷ್ಟಗಳನ್ನು ಕರುಣಿಸುವ ಚೇತನ ಸಮಾಧಿಯಾಗಿರುತ್ತದೆ.

# ಶ್ರೀ ಸಿದ್ಧಲಿಂಗ ಶಿವಾಚಾರ್ಯ ಸ್ವಾಮಿಯವರು

ಕರ್ನಾಟಕಮಾತೆ ಅನೇಕ ವೀರರನ್ನು, ಕವಿಗಳನ್ನು, ತತ್ವಜ್ಞಾನಿಗಳನ್ನು, ವಿಭೂತಿ ಪುರುಷರನ್ನು, ತ್ಯಾಗಿಗಳನ್ನು ಹೆತ್ತ ಧೀರ ಜನನಿ. ಮಾತೆಯ ಮಡಿಲಿನಲ್ಲಿ ಬೆಳೆದು ತಮ್ಮ ಅಮೂಲ್ಯ ಜ್ಞಾನವನ್ನು ಜಗತ್ತಿಗೆ ಸಾರಿ ಅನೇಕ ಮಹಾ ಮಹಿಮರಾಗಿ ಹೋಗಿದ್ದಾರೆ. ಈ ಪರಂಪರೆಯ ಕಡೆ ಸಿಂಹಾವಲೋಕನ ಮಾಡಿದಾಗ ನಮಗೆ ಅನೇಕ ಆಚಾರವಂತ ಮನೆತನಗಳು ಗೋಚರವಾಗುತ್ತವೆ.

ಬೆಂಗಳೂರು ಜಿಲ್ಲಾ ರಾಮನಗರ ತಾಲ್ಲೂಕಿನಲ್ಲಿ ಹುಣಸೆದೊಡ್ಡಿ ಒಂದುಸಣ್ಣ ಊರು. ಈ ಗ್ರಾಮ ಚಿಕ್ಕದಾದರೂ ಧರ್ಮ ಸಂಸ್ಕೃತಿಗಳಿಗೆ ತವರುಮನೆ. ಆಚಾರವಂತರೂ, ಭಕ್ತಿವಂತರೂ ಆದ ಚನ್ನಬಸವಯ್ಯನವರಿಗೆ ಶಿವಪೂಜಾ ಮತ್ತು ಪತಿ ಸೇವೆಯಲ್ಲಿ ನಿರತಳಾದ ಸಾತ್ವಿಕ ಸ್ವಭಾವದ ಭದ್ರಮ್ಮನು ಮಡದಿಯಾಗಿದ್ದಳು.

ಮಠಸ್ಥರಾದ ಈ ದಂಪತಿಗಳು ಗುರು ಜಂಗಮರಲ್ಲಿ ಭಕ್ತಿಯುಳ್ಳವರಾಗಿ ಮನೆಗೆ ಬಂದ ಗುರು, ಜಂಗಮ, ಅತಿಥಿ ಅಭ್ಯಾಗತರಿಗೆ ಭಕ್ತಿಯಿಂದ ಸೇವೆ ಸಲ್ಲಿಸಿ ಅವರುಗಳ ಕೃಪೆಗೆ ಪಾತ್ರರಾಗಿ ಸನ್ಮಾರ್ಗದಲ್ಲಿ ನಡೆಯುತ್ತಿರಲು ಈ ದಂಪತಿಗಳಿಗೆ ಬಸಮ್ಮ, ನಂಜಮ್ಮ, ನೀಲಮ್ಮ, ಚನ್ನಬಸಮ್ಮ, ಶಿವಮ್ಮ ಎಂಬ ಐದುಜನ ಹೆಣ್ಣು ಮಕ್ಕಳೂ, ಚನ್ನಬಸವಯ್ಯ ಗುರುನಂಜಯ್ಯ ಸಿದ್ಧಲಿಂಗಸ್ವಾಮಿ, ಗವಿಬಸವಯ್ಯ ಎಂಬ ನಾಲ್ಕುಜನ ಗಂಡುಮಕ್ಕಳೂ ಜನಿಸಿದರು. ಈ ಪುಣ್ಯ ದಂಪತಿಗಳ ತೃತೀಯ ಪುತ್ರರೇ ಶ್ರೀ ಸಿದ್ಧಲಿಂಗ ಶಿವಾಚಾರ್ಯ ಸ್ವಾಮಿಗಳು.

ಸಿದ್ಧಲಿಂಗ ಸ್ವಾಮಿಯವರು ಚಿಕ್ಕವರಾಗಿದ್ದಾಗಲೇ ತುಂಬಾ ಚುರುಕು ಬುದ್ಧಿಯುಳ್ಳವರಾಗಿದ್ದರು. ಆಚಾರ ಮತ್ತು ತ್ಯಾಗ ಗುಣಗಳು ಅವರಿಗೆ ಹುಟ್ಟುವಾಗಲೆ ಬಂದಿದ್ದವು. ಇವರ ನಡೆನುಡಿಗಳನ್ನು ನೋಡಿದ ತಂದೆ ತಾಯಿಗಳಿಗೆ ಆಶ್ಚರ್ಯದ ಜೊತೆಗೆ ಅಮಿತಾನಂದ. ಶಿವ ಈಗಲಾದರೂ

ನಮ್ಮ ಮೇಲೆ ಕರುಣೆಯಿಟ್ಟು ನಮ್ಮ ಗವೀ ಮಠದ ಜ್ಯೋತಿಯನ್ನು ಬೆಳಗಿಸಲು ಆಚಾರವಂತ ಪುತ್ರ ರತ್ನವನ್ನು ಕರುಣಿಸಿದನೆಂದು ಸಂತೋಷಪಡುತ್ತಿದ್ದರು.

ಮಕ್ಕಳ ವಿದ್ಯಾಭ್ಯಾಸದ ಕಡೆ ವೇ|| ಚನ್ನಬಸವಯ್ಯನವರಿಗೆ ಹೆಚ್ಚು ಆಸಕ್ತಿ. ಆಗ ಪ್ರತಿ ಗ್ರಾಮದಲ್ಲಿ ಶಾಲೆಗಳು ಇಲ್ಲವಾದ್ದರಿಂದ ಶ್ರೀಯುತರು ಮಕ್ಕಳಿಗೆ ವಿದ್ಯಾಭ್ಯಾಸಮಾಡಿಸಲು ವಿದ್ಯಾವಂತರಾದ ಶೈವ ಬ್ರಾಹ್ಮಣ ಪಂಡಿತರನ್ನು ಕರೆತಂದು ಅವರಿಗೆ ಮನೆ ಮತ್ತು ಜಮೀನನ್ನು ಕೊಟ್ಟು, ಗ್ರಾಮದ ಮತ್ತು ತಮ್ಮ ಮಕ್ಕಳಿಗಾಗಿ ಅವರಿಂದ ಒಂದು ಪಾಠಶಾಲೆಯನ್ನು ಪ್ರಾರಂಭಿಸಿದರು. ಶಾಲೆಯಲ್ಲಿ ಕನ್ನಡ ವಿದ್ಯಾಭ್ಯಾಸ ಜರುಗಿತು.

ಪಾಠಶಾಲೆಯಲ್ಲಿ ಸಿದ್ಧಲಿಂಗ ಸ್ವಾಮಿಗಳು ತುಂಬಾ ಬುದ್ಧಿವಂತರೂ, ವಿನಯವಂತರೂ, ಗುಣಶಾಲಿಯೂ ಆಗಿ ಗುರುಗಳಿಗೆ ಪ್ರಿಯ ವಿದ್ಯಾರ್ಥಿಯಾದರು. ಅಮರ ಶಬ್ದ ಶಿವಸ್ತೋತ್ರಗಳನ್ನು ಕಲಿಯುವುದರಲ್ಲಿ ತುಂಬಾ ಆಸಕ್ತಿ ಹೆಚ್ಚು ಹೆಚ್ಚು ಕಲಿಯಬೇಕೆಂಬ ಉತ್ಸಾಹ, ಇವೆಲ್ಲವೂ ತಂದೆ ತಾಯಿಗಳಿಗೂ, ಉಪಾಧ್ಯಾಯರಿಗೂ ಸಂತೋಷವನ್ನುಂಟು ಮಾಡಿದವು.

ಹಿರಿಯ ಅಕ್ಕನವರಾದ ಬಸಮ್ಮ ಮನೆಯಲ್ಲಿ ವಿದ್ಯಾವಂತೆ, ಗುಣವಂತೆ. ಇವರನ್ನು ದೊಡ್ಡಗಂಗವಾಡಿಯ ಮಾಹೇಶ್ವರ ವಂಶಜರಾದ ಶ್ರೀ ಕೆಂಪ ಒಡೆಯರ ಪುತ್ರ ವೇ|| ವೀರಭದ್ರ ಶಾಸ್ತ್ರಿಗಳಿಗೆ ಕೊಟ್ಟು ವಿವಾಹ ಮಾಡಿದರು. ಸಹೋದರರನ್ನು ಎಡೆಬಿಡದೆ ಪ್ರೀತಿಸುತ್ತಿದ್ದ ಬಸಮ್ಮ ಅವರನ್ನು ಬಿಟ್ಟಿರಲಾಗಲಿಲ್ಲ. ಅಕ್ಕ ಎಂದರೆ ಎಲ್ಲರಿಗೂ ಪಂಚ ಪ್ರಾಣ. ಅದ್ದರಿಂದ ಅಕ್ಕನೊಡನೆ ದೊಡ್ಡಗಂಗವಾಡಿಗೆ ತೆರಳಬೇಕಾಯಿತು. ಅಲ್ಲಿಯೇ ಪ್ರಾಥಮಿಕ ಶಾಲೆಯಲ್ಲಿ ಸಿದ್ಧಲಿಂಗಸ್ವಾಮಿಯವರ ವಿದ್ಯಾಭ್ಯಾಸ ಮುಂದುವರಿಯಿತು.

ಅಂಕನಹಳ್ಳಿ ಶ್ರೀ ಗವಿಮಠದ ವ್ಯವಸ್ಥೆಯನ್ನು ನೋಡುತ್ತಿದ್ದ ಶ್ರೀ ಬಸವಯ್ಯ ಸ್ವಾಮಿಗಳಿಗೆ ವಯಸ್ಸಾಗಲು, ಅವರು ಮತ್ತು ಮಠದ ಶಿಷ್ಯರುಗಳು ಹುಣಸೆದೊಡ್ಡಿಗೆ ಬಂದು ಶ್ರೀ ಚನ್ನಬಸವಯ್ಯನವರೊಡನೆ ಮಾತಾಡಿ "ಚನ್ನಬಸವಯ್ಯ, ನನಗೆ ವಯಸ್ಸಾಯಿತು. ನಾನು ಇನ್ನು ಎಷ್ಟುದಿನ ಶ್ರೀ ಗುರು ಫಿರಂಗೀಶ್ವರನ ಸೇವೆ ಮಾಡಬಲ್ಲೆ? ತಮ್ಮ ವಂಶದವರೇ

ಹಿಂದಿನಿಂದಲೂ ಶ್ರೀ ಮಠದ ಪೀಠಾಧೀಶ್ವರರುಗಳಾಗಿ ಬಂದಿರುತ್ತಾರೆ. ಆದ್ದರಿಂದ ನಿಮ್ಮ ಮಗ ಸಿದ್ಧಲಿಂಗಸ್ವಾಮಿಯು ಒಳ್ಳೆಯ ತೇಜಸ್ವಿಯೂ, ಚತುರನೂ, ವಿನೀತನೂ, ಆಚಾರವಂತನೂ ಆಗಿ ಕಾಣುವುದರಿಂದ, ಈತನಿಗೆ ಶ್ರೀ ಮಠದ ಅಧಿಕಾರವನ್ನು ವಹಿಸುವುದು ಯೋಗ್ಯವೆಂದು ಈತನನ್ನು ನೋಡಿದಾಗಲಿಂದ ನನಗೆ ತೋರುತ್ತಿದೆ. ಆದ್ದರಿಂದ ಈ ವಟುವನ್ನು ನಮ್ಮ ಅಂಕನಹಳ್ಳಿ ಮಠದ ಉತ್ತರಾಧಿಕಾರಿಯನ್ನಾಗಿ ಸ್ವೀಕರಿಸುತ್ತೇವೆ. ನೀವು ಉದಾರ ಮನಸ್ಸಿನಿಂದ ಅನುಮತಿಸಬೇಕೆಂದರು". ಶ್ರೀಗಳ ವಚನಕ್ಕೆ ಅನುಮತಿ ದೊರೆಯಿತು.

ಅಂಕನಹಳ್ಳಿ ಗವಿಮಠದ ಪಟ್ಟಾಧಿಕಾರವನ್ನು ನೆರವೇರಿಸಬೇಕೆಂದು ಶ್ರೀ ಬಸವಯ್ಯಸ್ವಾಮಿಗಳು, ಚನ್ನಬಸವಯ್ಯನವರು ಮತ್ತು ಮಠದ ಶಿಷ್ಯರುಗಳು ನಿರ್ಧರಿಸಿ 1935 ನೇ ಇಸವಿ ಶ್ರೀ ಯುವ ಸಂವತ್ಸರದ ವೈಶಾಖ ಶುದ್ಧ ತೃತೀಯ ಭಾನುವಾರದಂದು ವೀರಶೈವ ಧರ್ಮದ ವಿಧಿ ಪೂರ್ವಕ ಶಿವದೀಕ್ಷಾ, ಷಟ್‌ಸ್ಥಲ ಬ್ರಹ್ಮೋಪದೇಶ ಪಂಚಮುದ್ರಾಪ್ರದಾನದೊಡನೆ ಅಂಕನಹಳ್ಳಿ ಶ್ರೀ ಗವಿಮಠದ ಶಿವಧರ್ಮ ಪಟ್ಟಾಧಿಕಾರವನ್ನು ಅರೆಶಂಕರ ಮಠದ ಪೂಜ್ಯ ಷ|| ಬ್ರ|| ಶ್ರೀ|| ನೀಲಕಂಠ ಶಿವಾಚಾರ್ಯಸ್ವಾಮಿಗಳು ಶ್ರೀ ಸಿದ್ಧಲಿಂಗ ಸ್ವಾಮಿಯವರಿಗೆ ವಹಿಸಿಕೊಟ್ಟರು. ಪಟ್ಟಾಧಿಕಾರ ಮಹೋತ್ಸವವು ನಡೆದ ನಂತರ ನೆರೆದಿದ್ದ ಶ್ರೀ ಗುರು ಜಂಗಮರು ನೂತನ ಶ್ರೀಗಳಿಗೆ ಶ್ರೀಮಠದ ಸಂಪ್ರದಾಯದಂತೆ "ಷ|| ಬ್ರ|| ಶ್ರೀ ಸಿದ್ಧಲಿಂಗ ಶಿವಾಚಾರ್ಯ ಸ್ವಾಮಿಗಳು" ಎಂದು ನೂತನ ನಾಮಕರಣ ಮಾಡಿ ಆಶೀರ್ವದಿಸಿದರು.

ಶ್ರೀಗಳವರಿಗೆ ಮೊದಲಿನಿಂದಲೂ ನಾನು ಬ್ರಹ್ಮಚಾರಿಯಾಗಿಯೇ ಇರಬೇಕು. ನನ್ನ ಜೀವನವನ್ನು ಶಿವಧ್ಯಾನ, ಶಿವಪೂಜೆ, ತಪಸ್ಸುಗಳಲ್ಲಿ ಕಾಲ ಕಳೆಯಬೇಕೆಂಬ ಆಸೆಯಿತ್ತು. ಅಧಿಕಾರ ವಹಿಸಿಕೊಂಡಾಗ ಶ್ರೀಗಳ ವಯಸ್ಸಾದರೋ! ಎಂಟು ಮಾತ್ರ. ಮೂರ್ತಿ ಚಿಕ್ಕದಾದರೂ, ಕೀರ್ತಿ ಪಡೆಯಬೇಕೆನ್ನುವ ಹಂಬಲ ಹೊರ ಮೂಡಿತು.

ಗುರುಪೀಠವನ್ನು ಹತ್ತಿದ ಮೇಲೆ ಅನೇಕ ಜವಾಬ್ದಾರಿಗಳನ್ನು ನಿರ್ವಹಿಸಬೇಕಾಯಿತು. ಮಠವೆಲ್ಲಾ ಶಿಥಿಲವಾಗಿತ್ತು. ವ್ಯವಸಾಯ ಮಾಡುವವರೂ

ಇಲ್ಲ. ಮಠದ ಆರ್ಥಿಕ ಸ್ಥಿತಿಯಂತೂ ಹೇಳತೀರದು. ನಿತ್ಯವೂ ದರ್ಶನಕ್ಕೆ ಬರುವ ಶಿಷ್ಯರ ಯೋಗಕ್ಷೇಮ ನೋಡಬೇಕು. ಅವರುಗಳಿಗೆ ಮಠದಲ್ಲಿಯೇ ಪ್ರಸಾದ ನಡೆಯಬೇಕು. ಈ ಎಲ್ಲಾ ಸಮಸ್ಯೆಗಳು ತಲೆದೋರಿದವು. ಆದರೆ ಸುಮ್ಮನೆ ಯೋಚನೆ ಮಾಡಿದರೆ ಪ್ರಯೋಜನವೇನು? ಎಲ್ಲಕ್ಕೂ ಶ್ರೀಗುರು ಫಿರಂಗೀಶ್ವರನಿದ್ದಾನೆ ಎಂದು ನಂಬಿ ಮಠದ ಕಾರ್ಯಗಳನ್ನು ಪ್ರಾರಂಭಿಸಿದರು.

ಶ್ರೀಗಳು ಕುಣಿಗಲ್, ರಾಮನಗರ, ಕನಕಪುರ, ಮಾಗಡಿ ಪ್ರಾಂತ್ಯಗಳಲ್ಲಿ ಸಂಚಾರ ಮಾಡಿ, ಶಿಷ್ಯರಿಗೆ ವೀರಶೈವ ಧರ್ಮವನ್ನು ಬೋಧಿಸತೊಡಗಿದರು. ಜನರು ಗುರುಗಳ ಉಪದೇಶದಿಂದ ತಮ್ಮ ಜೀವನದಲ್ಲಿ ಹೊಸ ಬೆಳಕನ್ನು ಕಂಡರು. ಶ್ರೀಗಳ ಸಂಚಾರದಿಂದ ಹೆಚ್ಚು ಜನರು ಮಠಕ್ಕೆ ಬಂದು ಸೇವೆಯಲ್ಲಿ ತೊಡಗಿದರು.

ಮಠವನ್ನು ಅಭಿವೃದ್ಧಿ ಮಾಡುವ ಜೊತೆಗೆ ತಾವು ವಿದ್ಯಾವಂತರಾಗಬೇಕೆಂಬ ಹಂಬಲ ಶ್ರೀಗಳಲ್ಲಿ ಮೂಡಿಬಂದಿತು. ಆದ್ದರಿಂದ ಬೆಂಗಳೂರಿಗೆ ಹೋಗಿ ಸಂಸ್ಕೃತ ಮತ್ತು ವೇದಾಭ್ಯಾಸ ಮಾಡಬೇಕು ಎಂದು ನಿರ್ಧರಿಸಿ ಶ್ರೀ ಬಸವಯ್ಯ ಸ್ವಾಮಿಗಳಿಗೂ, ಹಿರಿಯರಿಗೂ ತಮ್ಮ ಅಭಿಪ್ರಾಯವನ್ನು ತಿಳಿಸಿದರು. ಅವರುಗಳು ಶ್ರೀಗಳಿಗಿರುವ ಆಕಾಂಕ್ಷೆಯನ್ನು ಕಂಡು ಕಳುಹಿಸಿಕೊಡುವುದಾಗಿ ಆಶ್ವಾಸನೆಯಿತ್ತರು.

ಜ್ಞಾನಾರ್ಜನೆಯ ಆಸಕ್ತಿ ದಿನ ದಿನಕ್ಕೆ ಹೆಚ್ಚುತ್ತಾ ಹೋಯಿತು. ಶ್ರೀ ಸಿದ್ಧಲಿಂಗ ಯತಿಗಳ ಪುರಾಣ, ಕೈವಲ್ಯ ಪದ್ಧತಿ, ಶ್ರೀ ಸಿದ್ಧಾಂತ ಶಿಖಾಮಣಿ ಶರಣರ ವಚನಗಳನ್ನು ಪ್ರತಿನಿತ್ಯ ಮಠದಲ್ಲಿಯೇ ಪಾರಾಯಣ ಮಾಡಲು ಉಪಕ್ರಮಿಸಿದರು.

ಧರ್ಮ ಪ್ರಚಾರ ಮಾಡುತ್ತ ಸಂಚರಿಸುತ್ತಿದ್ದ ಬಾಳೆಹೊನ್ನೂರು ಪೀಠದ ಹಿಂದಿನ ಜಗದ್ಗುರು ಶ್ರೀ ಶಿವಾನಂದ ರಾಜೇಂದ್ರ ಶಿವಾಚಾರ್ಯ ಮಹಾಸ್ವಾಮಿಗಳು ಚಕ್ರಭಾವಿ ಬೃಹನ್ಮಠಕ್ಕೆ 1941ರಲ್ಲಿ ದಯಮಾಡಿದ್ದರು. ಜಗದ್ಗುರುಗಳ ಅಧ್ಯಕ್ಷತೆಯಲ್ಲಿ ಧಾರ್ಮಿಕ ಸಭೆ ಏರ್ಪಡಿಸಿ, ಸುತ್ತಮುತ್ತಲ ಮಠಾಧೀಶ್ವರರಿಗೂ, ವಿದ್ವಾಂಸರಿಗೂ ಕರೆಬಂದಿತು. ಆ ಸಭೆಗೆ ಎಲ್ಲರಂತೆ ಶ್ರೀ ಸಿದ್ಧಲಿಂಗ ಶಿವಾಚಾರ್ಯ ಸ್ವಾಮಿಗಳೂ ಹೋಗಿ ಭಾಗವಹಿಸಿದರು. ಸಭೆಯು

ಬಹಳ ವೈಭವದಿಂದಲೇ ನಡೆದು ಮುಕ್ತಾಯವಾಯಿತು.

"ಅದೊಂದು ಅಪೂರ್ವ ಸನ್ನಿವೇಶ" ಜಗದ್ಗುರುಗಳ ದರ್ಶನ, ಆಶೀರ್ವಾದ ಪಡೆಯಬೇಕೆಂಬ ಅಪೇಕ್ಷೆಯಿಂದ ಎಲ್ಲರಂತೆ ಶ್ರೀಗಳೂ ಹೋಗಿ ದರ್ಶನ ಪಡೆದರು. 'ತೇಜಸ್ವಿಯಾದ ಬಾಲಕ ಬಾಲ್ಯದಲ್ಲಿಯೇ ಗುರುಪೀಠವನ್ನು ಹತ್ತಿರುವ ವಿಷಯವನ್ನು ಕೇಳಿದ ಜಗದ್ಗುರುಗಳು ಆನಂದಪಟ್ಟು ನೀವು ನಮ್ಮೊಡನೆ ಬರುತ್ತೀರ, ನಿಮಗೆ ನಾವೇ ವಿದ್ಯಾಭ್ಯಾಸ ಮಾಡಿಸುತ್ತೇವೆ ಎಂದು ಅಪ್ಪಣೆ ಕೊಡಿಸಿದರು. ಜಗದ್ಗುರುಗಳ ವಾಣಿ ಇವರಿಗೆ ನವಚೈತನ್ಯವನ್ನುಂಟುಮಾಡಿತು. "ಗುರು ಮುಟ್ಟಿ ಗುರುವಾದರು" ಎಂಬ ಋಷಿವಾಣಿ ಜ್ಞಾಪಕಕ್ಕೆ ಬಂದಿತು. ಜ್ಞಾನದ ತಾಯಿಯನ್ನು ಹುಡುಕುತ್ತಿದ್ದ ಮಗುವಿಗೆ ಕಾಮಧೇನು ದೊರಕಿದಂತಾಯಿತು. ತಮ್ಮ ಮಠದ ಹಿರಿಯರ ಅನುಮತಿ ಪಡೆದು ಜಗದ್ಗುರುಗಳ ಜೊತೆಯಲ್ಲಿ ಅಂದೇ ವಿದ್ಯಾಭ್ಯಾಸಕ್ಕೆ ಹೊರಟರು.

ಜಗದ್ಗುರುಗಳೇ ತಮ್ಮ ಬಿಡುವಿನ ವೇಳೆಯಲ್ಲಿ ತಮ್ಮ ಆಶ್ರಯದಲ್ಲಿದ್ದ ವಿದ್ಯಾರ್ಥಿಗಳಿಗೂ, ಮಠಾಧೀಶ್ವರರಿಗೂ, ಕಾವ್ಯ. ನಾಟಕ, ಚಂಪೂ ಗ್ರಂಥಗಳನ್ನು, ಅಲಂಕಾರ, ವ್ಯಾಕರಣ, ವೇದಾಂತ ಶಾಸ್ತ್ರಗಳನ್ನೂ ಬೋಧಿಸುತ್ತಿದ್ದರು. ಜಗದ್ಗುರುಗಳ ಪಾಠ ವಿದ್ಯಾರ್ಥಿಗಳಿಗೆ ಹೆಚ್ಚು ಉತ್ಸಾಹ ತರುತ್ತಿತ್ತು.

ಧರ್ಮ ಸಭೆಗಳಲ್ಲಿ ಜಗದ್ಗುರುಗಳು ನಿರೂಪಿಸುತ್ತಿದ್ದ ಭಾಷಣಗಳನ್ನು ಕೇಳಿದಾಗಲೆಲ್ಲಾ, ಶ್ರೀಗಳಿಗೆ ವೀರಶೈವ ಧರ್ಮವನ್ನು ಹೆಚ್ಚು ತಿಳಿಯಬೇಕೆಂಬ ಆಕಾಂಕ್ಷೆ ಮೂಡುತ್ತಿತ್ತು. ಕರ್ನಾಟಕ, ಆಂಧ್ರ, ಮದರಾಸು, ಕೇರಳ, ಮಹಾರಾಷ್ಟ್ರ ಮತ್ತು ಉತ್ತರ ಪ್ರದೇಶ ಮುಂತಾದ ರಾಜ್ಯಗಳಲ್ಲಿ ಜಗದ್ಗುರುಗಳು ಕೈಗೊಂಡ ಧರ್ಮ ಜಾಗೃತಿಕ ಯಜ್ಞದಲ್ಲಿ ಭಾಗವಹಿಸಿದರು. ಪೂಜ್ಯ ಜಗದ್ಗುರುಗಳ ವಾಣಿ ಸಂಪೂರ್ಣವಾಗಿ ಅರಿವನ್ನುಂಟುಮಾಡಿತು.

ಶ್ರೀ ಸಿದ್ಧಲಿಂಗ ಶಿವಾಚಾರ್ಯ ಸ್ವಾಮಿಗಳಲ್ಲಿ ಇರುವ ಧರ್ಮಾಸಕ್ತಿ, ತ್ಯಾಗ ಗುಣ, ಜ್ಞಾನಾರ್ಜನೆಯ ಅಭಿಲಾಷೆಗಳನ್ನು ಗುರುತಿಸಿದ ಜಗದ್ಗುರುಗಳು ಹೆಚ್ಚಿನ ವಿದ್ಯಾಭ್ಯಾಸಕ್ಕಾಗಿ 1943 ರಲ್ಲಿ ಬೆಂಗಳೂರು ಸಂಸ್ಕೃತ ಕಾಲೇಜಿಗೆ ಕಳುಹಿಸಿಕೊಟ್ಟರು.

ಬೆಂಗಳೂರಿಗೆ ಬಂದು ಶ್ರೀ ಮಹಂತರ ಮಠದಲ್ಲಿ ಆಶ್ರಯ ಪಡೆದು

ಸಂಸ್ಕೃತ ಕಾಲೇಜಿಗೆ ಸೇರಿ ಕಾವ್ಯ, ಸಾಹಿತ್ಯ ಪರೀಕ್ಷೆಯವರೆಗೆ ಅಭ್ಯಾಸ ಮುಂದುವರಿಸಿದರು. ಸಂಸ್ಕೃತ ಸಾಹಿತ್ಯದ ಜೊತೆಗೆ ವೇದ, ವೇದಾಂತ ಗ್ರಂಥಗಳನ್ನು ಖಾಸಗಿಯಾಗಿ ಅಭ್ಯಾಸಮಾಡಿದರು. ವೇದಾಂತ ಅಭ್ಯಾಸ ಮಾಡಿದಾಗ ಶಿವಾದ್ವೈತ ತತ್ತ್ವಗಳು ಮನಸ್ಸಿನ ಮೇಲೆ ಹೆಚ್ಚು ಪರಿಣಾಮ ವನ್ನು ಬೀರಿದವು. ವೇದಾಂತ ಅಭ್ಯಾಸದಿಂದ ಕೆಟ್ಟ ಮನುಷ್ಯನು ಉತ್ತಮ ಮಾರ್ಗದಲ್ಲಿ ನಡೆಯಬಲ್ಲನೆಂದು ತಿಳಿದು, ತಮ್ಮ ಜೀವನದಲ್ಲಿ ಹೊಸ ಬೆಳಕನ್ನು ಕಂಡುಕೊಂಡರು.

ಶ್ರೀ ಗುರುಗಳು ಗವಿ ಮಠಕ್ಕೆ ಹಿಂದಿರುಗಿದ ನಂತರ ತಪಸ್ಸಿನ ಮಾರ್ಗ ವಾದ, ಯೋಗ ಸಾಧನೆಗಳನ್ನು ಮಾಡತೊಡಗಿದರು. ತಪಸ್ಸು ಅಂದರೆ ಆಧ್ಯಾತ್ಮ ಶಕ್ತಿಯನ್ನು ಶೇಖರಿಸುವುದು ಎಂದರ್ಥ. ಮನಸ್ಸನ್ನು ಸದಾಶಿವ ನಲ್ಲಿಯೇ ನೆಲಸುವಂತೆ ಮಾಡುವುದು ತಪಸ್ಸೆನ್ನಬಹುದು. ಮನಸ್ಸನ್ನು ದೇವರಲ್ಲಿಯೇ ನಿಲ್ಲಿಸುವುದು ಕಷ್ಟ. ಅತ್ತ ಇತ್ತ ಹರಿದಾಡುವ ಮನಸ್ಸು, ಕಣ್ಣು, ನಾಲಿಗೆ ಮತ್ತು ಕೈ-ಬಾಯಿಗಳನ್ನು ಹತೋಟಿಯಲ್ಲಿಟ್ಟುಕೊಂಡು ಸಂಪೂರ್ಣವಾಗಿ ಶಿವಯೋಗದ ಕಡೆಗೇ ತಿರುಗಿಸುವುದೇ ತಪಸ್ಸು. ಹಿಂದಿನ ಅನೇಕ ಶಿವಯೋಗಿಗಳು ತಮ್ಮ ದೇಹವನ್ನು ತುಚ್ಛವೆಂದು ತಿಳಿದು ಪದಾರ್ಥ ಗಳ ಕಡೆ ಮನಸ್ಸುಕೊಡದೆ, ಸದಾಶಿವ ಧ್ಯಾನದಲ್ಲಿಯೇ ಇದ್ದು ಬಿಡುತ್ತಿದ್ದರು. ಶಿವ ಸಾಕ್ಷಾತ್ಕಾರವನ್ನು ಪಡೆಯಬೇಕೆನ್ನುವ ಶಿವಯೋಗಿಗೆ ಹಸಿವು, ಬಾಯಾರಿಕೆ, ನಿದ್ದೆ, ಯಾವುದೂ ಇರುವುದಿಲ್ಲ. ಇಂತಹ ಸ್ಥಿತಿಯನ್ನು ಸಮಾಧಿ ಸ್ಥಿತಿಯನ್ನುತ್ತಾರೆ. ಈ ಸ್ಥಿತಿಯನ್ನು ತಲುಪಿದ ಶಿವಯೋಗಿ ಪ್ರಪಂಚದ ಎಲ್ಲಾ ಪದಾರ್ಥಗಳಲ್ಲಿಯೂ ಭಗವಂತನನ್ನೇ ಕಾಣುತ್ತಾನೆ. ಈ ಮಾರ್ಗವನ್ನೇ ತಮ್ಮ ಜೀವನದಲ್ಲಿ ಅಳವಡಿಸಿಕೊಂಡು ಶ್ರೀ ಸಿದ್ಧಲಿಂಗ ಶಿವಾಚಾರ್ಯ ಸ್ವಾಮಿಗಳವರು ಆಧ್ಯಾತ್ಮಿಕ ಶಕ್ತಿಯನ್ನು ಬೆಳಸಿಕೊಳ್ಳಲು ಹುಣಸೆದೊಡ್ಡಿಯ ಶ್ರೀ ರುದ್ರ ದೇವಾಲಯದಲ್ಲಿ ಅನುಷ್ಠಾನವನ್ನು ಪ್ರಾರಂಭಿ ಸಿದರು.

ಶ್ರೀ ಗಳ ಅನುಷ್ಠಾನ ದಿನೇ ದಿನೇ ಬೆಳೆದು ಸೂರ್ಯನ ಕಿರಣದಂತೆ, ತಪಸ್ಸಿನ ಕಿರಣಗಳು ಎಲ್ಲಾ ಕಡೆಗಳಲ್ಲಿಯೂ ವ್ಯಾಪಿಸಿತು. ಅನೇಕ ಭಕ್ತರು ಬಂದು ದರ್ಶನ ಪಡೆದು ಹೋಗುತ್ತಿದ್ದರು. ಒಮ್ಮೆ ಶ್ರೀಗಳು ಧ್ಯಾನಮಗ್ನ



ಶ್ರೀ ಗವಿಮಠದಲ್ಲಿರುವ ಶಿವಲಿಂಗ

ಅಂಕನಹಳ್ಳಿ ಶ್ರೀ ಗವಿಮಠದಲ್ಲಿರುವ ವಿದ್ಯಾರ್ಥಿ ನಿಲಯ



ಶ್ರೀ ಗವಿಮಠದ ಪ್ರಸಾದನಿಲಯ



ಶ್ರೀ ಗವಿಮಠದಲ್ಲಿರುವ ಮಾಧ್ಯಮಿಕ ಶಾಲೆಯ ಉಪಾಧ್ಯಾಯರು ಮತ್ತು ವಿದ್ಯಾರ್ಥಿಗಳು

ಶ್ರೀ ಸಿದ್ದಲಿಂಗ ಶಿವಾಚಾರ್ಯ ಸ್ವಾಮಿಗಳು ಹೈಸ್ಕೂಲ್ ವಿದ್ಯಾರ್ಥಿಗಳಿಗೆ ಉಪದೇಶಿಸುತ್ತಿರುವುದು

ರಾಗಿದ್ದಾಗ ಅವರಿಗೆ ದೇವಾಲಯದ ಗೋಡೆಯೊಳಗೆ ಒಂದು ಲಿಂಗವಿರುವುದು ಗೋಚರವಾಯಿತು. ಧ್ಯಾನವನ್ನು ಮುಗಿಸಿ ಗುದ್ದಲಿಯನ್ನು ತರಿಸಿ ಬಗೆದು ನೋಡಲು ಸುಂದರವಾದ ಶಿವಲಿಂಗ ಕಾಣಿಸಿತು. ಆ ಶಿವಲಿಂಗವನ್ನು ಶ್ರೀಗಳ ಅಪೇಕ್ಷೆಯಂತೆ ರುದ್ರದೇವಾಲಯದಲ್ಲಿಯೇ ಪ್ರತಿಷ್ಠಾಪಿಸಿ ಇಂದಿಗೂ ಭಕ್ತರು ಪೂಜಿಸುತ್ತಾರೆ. ಶ್ರೀಗಳ ಅನುಷ್ಠಾನ ನಲವತ್ತೆಂಟು ದಿವಸಗಳು ವಿಧಿವತ್ತಾಗಿ ನಡೆಯಿತು. ಮುಕ್ತಾಯ ಕಾರ್ಯಕ್ರಮಕ್ಕೆ ಹತ್ತಾರು ಸಾವಿರ ಜನರು, ಬೆಟ್ಟಹಳ್ಳಿ ಮಠದ ಶ್ರೀಗಳು, ಹಿತ್ತಲಹಳ್ಳಿ ಮಠದ ಶ್ರೀಗಳು, ಸೊಲ್ಲಾಪುರದ ಹುಟಗಿ ಮಠಾಧೀಶ್ವರರು ಬಂದು ನೆರೆದರು. ಶ್ರೀಗಳವರ ಪೂಜಾನುಷ್ಠಾನ ಮುಗಿದ ನಂತರ, ಪೂಜ್ಯ ಶ್ರೀಗಳವರು ಬಂದ ಭಕ್ತಾದಿಗಳಿಗೆ ಆಧ್ಯಾತ್ಮ ತತ್ತ್ವೋಪದೇಶ ಮಾಡಿದರು. ನೆರೆದಿದ್ದ ಭಕ್ತವೃಂದ ಶ್ರೀಗಳವರ ಪ್ರತಿಭೆಯನ್ನು ಕಂಡು, ಶ್ರೀಗಳವರನ್ನೂ, ನೆರೆದಿದ್ದ ಸ್ವಾಮಿಜಿಯವರನ್ನೂ ಅಶ್ವ ಮತ್ತು ಪಲ್ಲಕ್ಕಿಯಲ್ಲಿ ಕೂಡಿಸಿ ಹುಣಸೆದೊಡ್ಡಿ, ಅಂಕನಹಳ್ಳಿ, ಗೇರಹಳ್ಳಿ ಮುಂತಾದ ಗ್ರಾಮಗಳಲ್ಲಿ, ಕಳಸ, ಕನ್ನಡಿ, ವೇದಘೋಷ, ವಾದ್ಯಗಳೊಡನೆ ಉತ್ಸವ ಮಾಡಿ ತಮ್ಮ ಭಕ್ತಿಯನ್ನು ಅರ್ಪಿಸಿದರು. ಈ ಕಾರ್ಯವನ್ನು ಹುಣಸೆದೊಡ್ಡಿಯ ಶ್ರೀ ಬಾಳಯ್ಯ, ಭೈರಯ್ಯ, ದೊಡ್ಡರಾಮಯ್ಯ ಚನ್ನಬಸವಯ್ಯ, ಅಂಕನಹಳ್ಳಿ ಪಟೇಲರು, ಗಾಮಸ್ಥರು ಸೇರಿ ವೈಭವದಿಂದ ನಡೆಸಿ ಶ್ರೀಗಳ ಮೆಚ್ಚಿಗೆಗೆ ಪಾತ್ರರಾದರು.

ಶ್ರೀ ಸಿದ್ಧಲಿಂಗ ಶಿವಾಚಾರ್ಯ ಸ್ವಾಮಿಗಳು ಶ್ರೀಮಠದಲ್ಲಿ ಬಂದು ನಿಂತು ತಾವು ಕಂಡ ಶಿವನ ತೇಜಸ್ಸನ್ನು, ಶಿವತತ್ತ್ವವನ್ನು, ಜನರಿಗೆ ತಿಳಿಯ ಪಡಿಸಲು, ಮತ್ತು ಶ್ರೀ ಫಿರಂಗೀಶ್ವರ ಮಹಿಮೆಯನ್ನು ಜನರ ಹೃದಯ ಮಂದಿರದಲ್ಲಿ ಬಿತ್ತಲು ಸಂಕಲ್ಪ ಮಾಡಿದರು. ಅಲ್ಲದೆ ಯುಗಧರ್ಮಕ್ಕೆ ತಕ್ಕಂತೆ ತಮ್ಮ ತತ್ತ್ವವನ್ನು ಅಳವಡಿಸಿಕೊಂಡು ಕೆಲವು ಯೋಜನೆಗಳನ್ನು ರೂಪಿಸಿಕೊಂಡರು. ೧. ಶ್ರೀಗುರು ಫಿರಂಗೀಶ್ವರ ಮಹಿಮೆಯನ್ನು ಭಕ್ತರಿಗೆ ಅರಿವು ಮಾಡಿಕೊಡುವುದು. ೨. ಶ್ರೀಮಠದ ಕಟ್ಟಡಗಳನ್ನು ಕಟ್ಟಿಸುವುದು. ೩. ಶ್ರೀಮಠದ ಭೂ ಸಂಪತ್ತನ್ನು ಹೆಚ್ಚಿಸಿ ನಿತ್ಯ ದಾಸೋಹ ನಡೆಸುವುದು. ೪. ಜ್ಞಾನಾರ್ಜನೆಗಾಗಿ ವಿದ್ಯಾ ಸಂಸ್ಥೆಗಳನ್ನು ತೆರೆಯುವುದು. ೫. ಬಿಡುವಿನ ವೇಳೆಯಲ್ಲಿ ಸಂಚಾರ ಮಾಡಿ ಧರ್ಮ

ಪ್ರಚಾರ ಮಾಡುವುದು. ಇವೇ ಮೊದಲಾದ ಯೋಜನೆಗಳನ್ನು ಹಾಕಿಕೊಂಡು ಅವುಗಳನ್ನು ಕಾರ್ಯರೂಪಕ್ಕೆ ತರಲು ಶ್ರಮಿಸತೊಡಗಿದರು. ಶ್ರೀಗಳ ಕಾರ್ಯ ಬಾಹುಳ್ಯವನ್ನು ಕಂಡು ಚಿಕ್ಕೋನಹಳ್ಳಿ ಶ್ರೀ ಗಂಗಣ್ಣನವರು, ಶ್ರೀ ಕಾಶಿಲಿಂಗಣ್ಣನವರು, ಶ್ರೀ ಎಸ್. ರಾಜಶೇಖರಯ್ಯನವರು, ಹುಣಸೆದೊಡ್ಡಿ ಬಾಳಯ್ಯನವರು, ಹೇರೊಹಳ್ಳಿ ಪಟೇಲರು, ಬೆಂಗಳೂರಿನ ಶ್ರೀ ಎ. ಸಿ. ಕೆ. ರಾಮಸ್ವಾಮಿ ಚೆಟ್ಟಿಯಾರ್‌ರವರೇ ಮುಂತಾದ ಅನೇಕ ಗಣ್ಯ ಶಿಷ್ಯರು ಶ್ರೀಗಳಿಗೆ ನೆರವಾದರು.

ತಾವು ವಿಧ್ಯಾಭ್ಯಾಸ ಮಾಡುವಾಗ ಶ್ರೀ ಸಿದ್ಧಗಂಗಾ ಕ್ಷೇತ್ರದ ಅಧ್ಯಕ್ಷರಾದ ಶ್ರೀ ಉದ್ದಾನ ಶಿವಯೋಗಿಗಳ ಆಶ್ರಯದಲ್ಲಿ ಒಂದು ವರ್ಷವಿದ್ದು ಅನೇಕ ಮಾರ್ಗದರ್ಶನ ಪಡೆದಿದ್ದರು, ಅಲ್ಲದೆ ಶಿವಯೋಗಿಗಳು ನಡೆಯುತ್ತಿದ್ದ ಮಾರ್ಗ, ಅವರ ನುಡಿಗಳು, ನೋಡಿದವರ ಮನಸ್ಸನ್ನು ಆಕರ್ಷಿಸಿ, ಅವರನ್ನು ಉತ್ತಮರನ್ನಾಗಿ ಮಾಡಿಬಿಡುತ್ತಿತ್ತು. ಅವರು ಹಚ್ಚಿದ ಜ್ಞಾನ ಮತ್ತು ಅನ್ನದಾಸೋಹದ ನಂದಾದೀವಿಗೆ, ನಾಡಿನ ಅನೇಕ ಕಡೆ ಬೆಳಕನ್ನು ಬೀರಿ ಜನರನ್ನು ಚೇತರಿಸತೊಡಗಿತ್ತು. ಈ ಪ್ರತಿಭೆ ಶ್ರೀ ಸಿದ್ಧಲಿಂಗ ಶಿವಾಚಾರ್ಯಸ್ವಾಮಿಗಳ ಮೇಲೂ ಪ್ರಭಾವ ಬೀರಿತು. ತಾವು ಜ್ಞಾನ ಮತ್ತು ದಾಸೋಹವನ್ನು ಜನಸಾಮಾನ್ಯರ ಕಲ್ಯಾಣಕ್ಕೆ ತೆರೆಯಬೇಕೆಂಬ ಅಪೇಕ್ಷೆ ಒಡಮೂಡಿ ಅಂಕನಹಳ್ಳಿ ಶ್ರೀ ಗವಿಮಠದಲ್ಲಿ ಶ್ರೀ ಫಿರಂಗಿಸ್ವಾಮಿ ಗುರುಕುಲಾಶ್ರಮ ವಿದ್ಯಾಪೀಠವನ್ನು ಸ್ಥಾಪಿಸಿದರು. ದಿನೇ ದಿನೇ ವಿದ್ಯಾಪೀಠದ ಕಾರ್ಯಕ್ರಮಗಳು ವಿಶಾಲಗೊಂಡುವು. ಸಿದ್ಧಗಂಗಾಮಠದ ಪೂಜ್ಯ ಶ್ರೀ ಶಿವಕುಮಾರಸ್ವಾಮಿಗಳ ಆಶೀರ್ವಾದದಿಂದಲೂ, ತಮ್ಮ ಕತೃತ್ವ ಶಕ್ತಿಯಿಂದಲೂ, ಶ್ರೀಮಠದಲ್ಲಿ ೧೯೫೦ರಲ್ಲಿ ಒಂದು ಮಾಧ್ಯಮಿಕ ಶಾಲೆಯನ್ನು ಆರಂಭಿಸಿದರು. ಈ ವಿದ್ಯಾನಿಲಯ ಹೆಚ್ಚು ಗ್ರಾಮೀಣ ವಿದ್ಯಾರ್ಥಿಗಳಿಗೆ ಆಶ್ರಯ ನೀಡಿತು. ವಿದ್ಯಾರ್ಥಿಗಳು ಬಹುದೂರ ಗ್ರಾಮಗಳಿಂದ ಬಂದು ವಿದ್ಯಾಭ್ಯಾಸ ಮಾಡತೊಡಗಿದರು. ಆ ಪ್ರಾಂತ್ಯದ ಮಕ್ಕಳು ಪ್ರೌಢ ಅಭ್ಯಾಸಕ್ಕೆ ಬಹುದೂರ ಹೋಗಬೇಕಾದ್ದರಿಂದ, ಜನರು ಬಂದು ಶ್ರೀಗಳನ್ನು ಒಂದು ಹೈಸ್ಕೂಲ್ ತೆರೆಯಲು ಒತ್ತಾಯಮಾಡಿದರು. ಜನರ ಬೇಡಿಕೆಯನ್ನು, ವಿದ್ಯಾರ್ಥಿಗಳು ಬಹುದೂರ ಹೋಗಿಬರಲು ಇದ್ದ ಅನಾನು

ಕೊಲತೆಗಳನ್ನು ಗಮನಿಸಿ ೧೯೫೫ರಲ್ಲಿ ರೂರಲ್ ರೆಸಿಡೆನ್ಷಿಯಲ್ ಹೈಸ್ಕೂಲನ್ನೂ, ಸಂಸ್ಕೃತ ಮತ್ತು ವೇದಪಾಠಶಾಲೆಯನ್ನೂ ಪ್ರಾರಂಭಿಸಿದರು. ಎಲ್ಲಾ ವರ್ಗದ ೨೦೦ ಜನ ಬಡ ವಿದ್ಯಾರ್ಥಿಗಳಿಗೆ ಉಚಿತ ಪ್ರಸಾದ ನಿಲಯವನ್ನು ತೆರೆದರು. ಈ ಮಹಾ ಕಾರ್ಯದ ಜೊತೆಗೆ ಶ್ರೀ ಮಠಕ್ಕೆ ಅವಶ್ಯಕವಾಗಿ ಬೇಕಾಗಿದ್ದ ವಿದ್ಯಾರ್ಥಿ ನಿಲಯ, ಪ್ರಸಾದ ನಿಲಯ, ಶ್ರೀ ಮಠದ ಕಟ್ಟಡಗಳನ್ನು ನಿರ್ಮಿಸಿದರು. ಶ್ರೀ ಮಠದ ಭೂ ಆಸ್ತಿಯನ್ನು ಅಭಿವೃದ್ಧಿಮಾಡಿ ಆ ಪ್ರದೇಶದ ಎಲ್ಲಾ ಮತೀಯ ಮಕ್ಕಳಿಗೂ ಆಶ್ರಯ ವಿತ್ತು ಜ್ಞಾನಾರ್ಜನೆ ಅಭಿವೃದ್ಧಿ ಮಾಡಿದರು. ಈ ಪವಿತ್ರ ಕಾರ್ಯದಿಂದ ಆ ನಾಡಿನ ಮಕ್ಕಳ ವಿದ್ಯಾಭ್ಯಾಸದ ಪ್ರಗತಿಗೆ ತುಂಬಾ ಅನುಕೂಲವಾಯಿತು. ಈ ಸಂಸ್ಥೆಯ ಆಶ್ರಯದಲ್ಲಿ ಸಾವಿರಾರು ಜನ ಬಡ ವಿದ್ಯಾರ್ಥಿಗಳು ಅಭ್ಯಾಸ ಮಾಡಿ ಇಂದು ಉನ್ನತ ಪದವಿಯನ್ನು ಪಡೆದಿರುವದು ಪ್ರಶಂಸನೀಯವಾದ ವಿಷಯ. ಈ ಪವಿತ್ರ ಕ್ಷೇತ್ರವು ತುಮಕೂರು ಜಿಲ್ಲೆ, ಕುಣಿಗಲ್ ತಾಲ್ಲೂಕಿಗೆ ಸೇರಿರುತ್ತದೆ. ಮಹಾತ್ಮರಾದ ಶ್ರೀ ಗುರು ಫಿರಂಗೀಶ್ವರರ ತಪೋ ಕ್ಷೇತ್ರವಾದ ಶ್ರೀ ಗವಿ ಮಠವು ಬೃಹತ್ ವಿದ್ಯಾ ಸಂಸ್ಥೆಯಾಗಿ ಬೆಳೆದು ಜನರ ಆಧ್ಯಾತ್ಮಿಕ ಮತ್ತು ಆಧುನಿಕ ವಿದ್ಯೆಯ ಜ್ಞಾನ ನಿವಾರಣೆಗೆ ಕಲ್ಪವೃಕ್ಷವಾಗುವುದರಲ್ಲಿ ಸಂದೇಹವಿಲ್ಲ. ಶ್ರೀಗಳು ಈ ಕಾರ್ಯಗಳ ಜೊತೆಯಲ್ಲಿ ಶ್ರಾವಣ, ಕಾರ್ತೀಕ ಮಾಸಗಳಲ್ಲಿ ಧಾರ್ಮಿಕ ಕಾರ್ಯಗಳನ್ನು ವೈಭವದಿಂದ ನೆಡೆಸುತ್ತಿರುವುದನ್ನು ಜನರು ಅರಿತಿದ್ದಾರೆ. ಶಿವರಾತ್ರಿಯ ಜಾತ್ರೆಯ ಕಾಲದಲ್ಲಿ ಹತ್ತಾರು ಸಾವಿರ ಜನರು ಬಂದು ಸೇರುತ್ತಾರೆ. ರಥೋತ್ಸವ, ವಿವಿಧ ವಾಹನೋತ್ಸವ, ಹೂವಿನ ಪಾಲಕಿ ಉತ್ಸವ, ಬಾಯಿ ಬೀಗದ ಸೇವೆ ನಡೆಯುತ್ತವೆ. (ಬಾಯಿಗೆ ಬೆಳ್ಳಿಕೊಂಡಿ ರೂಪದ ಬೀಗ ಹಾಕಿಸಿಕೊಂಡು ಒದ್ದೆ ಮಡಿಯಿಂದ ಬಂದು ಶ್ರೀ ಗುರು ಫಿರಂಗೀಶ್ವರರಿಗೆ ಹೊತ್ತ ಹರಕೆಯನ್ನು ಭಕ್ತರು ತೀರಿಸುವ ವಿಧಾನ) ಇಲ್ಲಿ ನಡೆಯುವ ಜಾತ್ರೆಗೆ ಬಹುದೂರದಿಂದಲೂ ಜನ ಬರುತ್ತಾರೆ. ಬಂದ ಯಾತ್ರಿಕರಿಗೆ ಶ್ರೀ ಮಠದಲ್ಲಿ ಪ್ರಸಾದ ನಡೆಯುತ್ತದೆ. ಗುರು ಫಿರಂಗೀಶ್ವರರ ತಪಶ್ಶಕ್ತಿಯನ್ನು ಕಂಡು ಎಲ್ಲಾ ವರ್ಗದ ಜನರು ಬಂದು ಜಾತ್ರೆ ಕಾಲದಲ್ಲಿ ಅವರ ಕರುಣೆಯನ್ನು ಯಾಚಿಸುವುದು ಪ್ರತ್ಯಕ್ಷ ನಿದರ್ಶನವಾಗಿದೆ. "ಹರ ಮುನಿದರೆ ಗುರು ಕಾಯುವ" ಎಂಬ ನುಡಿಯಂತೆ ಶ್ರೀ ಗುರು ಪೀಠವು ಜನರ ರಕ್ಷಾ ಕವಚವಾಗಿರುತ್ತದೆ.

# ಶ್ರೀಗಳ ವಾಣಿ

ಪವಿತ್ರವಾದ ಈ ಭರತ ಭೂಮಿಯಲ್ಲಿ ಪ್ರಾಚೀನ ಕಾಲದಿಂದಲೂ, ಅನೇಕ ಆಚಾರ್ಯರು, ಶರಣರು, ಜ್ಞಾನಿಗಳು ಅವತರಿಸಿ ತಮ್ಮ ಉಪದೇಶ ದಿಂದ ಇಡೀ ಸಮಗ್ರ ಮಾನವ ಕುಲವನ್ನೇ ಉದ್ಧಾರಮಾಡಿದ್ದಾರೆ.

ಗುರುವಿನ ಉಪದೇಶ ಶಿಷ್ಯಕೋಟಿಗೆ ಅತ್ಯಾವಶ್ಯಕವೆಂದು ಪ್ರಾಚೀನ ಧರ್ಮ ಗ್ರಂಥಗಳು ಸಾರಿ, ಗುರುಗಳ ಮಾರ್ಗದರ್ಶನದಿಂದ ಪ್ರತಿಯೋರ್ವನು ಬಾಳಿ ಬದುಕುತ್ತಿದ್ದಾನೆಂದು ವರ್ಣಿಸಿವೆ. ಆದ್ದರಿಂದಲೇ, ಇಂದಿಗೂ ಅನೇಕ ಮಠಗಳು ವಿದ್ಯಾರ್ಥಿಗಳಿಗೆ ಆಶ್ರಯವಿತ್ತು ಅವರ ಜ್ಞಾನಾರ್ಜನೆಗೆ ಅನುಕೂಲ ಮಾಡುತ್ತಿರುವುದು.

"ಯಸ್ಯ ದೇವೇ ಪರಾಭಕ್ತಿಃ ಯಥಾ ದೇವೇ ತಥಾ ಗುರೌ"

ದೇವರಲ್ಲಿ ಯಾವ ಭಕ್ತಿಯನ್ನಿರಿಸಿದ್ದೇವೆಯೋ, ಅದೇ ಭಕ್ತಿಯನ್ನು, ಗುರುವಿನಲ್ಲಿಯೂ ಇರಿಸಬೇಕೆಂದು ಶ್ವೇತಾಶ್ವತರೋಪನಿಷತ್ತಿನಲ್ಲಿ ಗುರುವಿಗೆ ಮಹತ್ವವನ್ನು ಕೊಟ್ಟಿರುವುದರಿಂದಲೇ ಜನರು ಗುರುವನ್ನು ಆಶ್ರಯಿಸು ತ್ತಿರುವುದು.

ಗುರುವು ಶಿಷ್ಯನ ಹೃದಯದಲ್ಲಿರುವ ಅಜ್ಞಾನಾಂಧಕಾರವನು ಹೋಗಲಾಡಿಸಿ, ಜ್ಞಾನವನ್ನು ದೊರಕಿಸಿ ಕೊಡಬಲ್ಲಾತನೆ "ಗುರು" ಶಬ್ದ ವಾಚ್ಯನಾಗುವನು.

"ಗು" ಶಬ್ದಸ್ತ್ವಂಧಕಾರಸ್ಸ್ಯು"ರು" ಶಬ್ದಸ್ತನ್ನಿರೋಧಕಃ | ಅಂಧಕಾರ ನಿರೋಧತ್ವಾತ್ "ಗುರು" ರಿತ್ಯಭಿಧೀಯತೇ || ಎಂಬ ವಚನವು ಅದನ್ನೇ ಹೇಳುತ್ತಿದೆ.

"ಗುರುವಿನ ಗುಲಾಮನಾಗುವ ತನಕ ದೊರೆಯದಣ್ಣ ಮುಕುತಿ"

---

*ವಿದ್ಯಾರ್ಥಿಗಳಿಗೆ ಒಮ್ಮೆ ಶ್ರೀ ಸಿದ್ಧಲಿಂಗ ಶಿವಾಚಾರ್ಯ ಸ್ವಾಮಿಯವರು ಉಪದೇಶಿಸಿದ ಉಕ್ತಿಗಳ ಸಂಗ್ರಹ

ಎಂದು ಜ್ಞಾನಿಗಳಾದ ಪುರಂದರದಾಸರು ನುಡಿದಿದ್ದಾರೆ. ತಂದೆ ತಾಯಿಗಳಿಗಿಂತಲೂ ಶಿಷ್ಯನ ಸಂಬಂಧವು ಗುರುವಿಗೆ ಜಾಸ್ತಿ.

"ಗುರು"ಎನ್ನುವ ಶಬ್ದ ಪ್ರಯೋಗ ಕೇವಲ ಶಾಲೆಯಲ್ಲಿ ಪಾಠ ಹೇಳುವ ಉಪಾಧ್ಯಾಯರಿಗೆ ಅಷ್ಟೇ ಅಲ್ಲ. ಭಾರತೀಯ ಜನತೆಯ ಜೀವಾಳವನ್ನು ಆದರ್ಶ ಸಂಸ್ಕೃತಿಗೆ ಕೊಂಡೊಯ್ಯುವ ಜ್ಞಾನಜ್ಯೋತಿಯಾಗಿದೆ. ಇದನ್ನೇ ವೇದವು "ಆಚಾರ್ಯದೇವೋ ಭವ" ಆಚಾರ್ಯರನ್ನು ದೇವರಂತೆ ಕಾಣು ಎಂದು ಆದೇಶ ನೀಡಿದೆ.

"ಶಿವಪಥವನರಿವಡೆ ಗುರುಪಥವೇ ಮೊದಲು" ಎಂದು ಬಸವಣ್ಣನವರು ನುಡಿದು ಜನತೆಗೆ ಮಾರ್ಗದರ್ಶನ ಮಾಡಿದ್ದಾರೆ. ಗುರುವನ್ನು ಶರಣು ಹೊಂದುವವರಿಗೆ ಶರಣಾಗತವತ್ಸಲನಾದ ಭಗವಂತನ ಕೃಪೆಯಾಗದಿರಲಾರದು.

ಬಾಲಕರಾದ, ಮಾರ್ಕಂಡೇಯ, ಧ್ರುವ, ಉಪಮನ್ಯು, ಪ್ರಹ್ಲಾದ, ಸಿದ್ಧರಾಮ, ಮೊದಲಾದವರು ವಯೋವೃದ್ಧರಾದ, ಜನಕ, ರಾಮ, ವಿಭೀಷಣ, ಬಸವಣ್ಣ ಮೊದಲಾದವರು ಗುರುವಿನ ಆಶ್ರಯದಿಂದಲೇ ಶಿವಾನುಗ್ರಹ ಸಂಪಾದಿಸಿದರಷ್ಟೆ. ಈ ಶರಣರ ಜೀವನದ ಒಂದು ಮಾರ್ಗವನ್ನಾದರೂ ಅಳವಡಿಸಿಕೊಳ್ಳದ ಮನುಷ್ಯ ಏನನ್ನೂ ಮಾಡಲಾರ.

ಮಗುವಿಗೆ ಮನೆಯೇ ಮೊದಲ ಪಾಠಶಾಲೆ, ತಾಯಿಯೇ ಮೊದಲ ಗುರು. ಮಾತೆಯ ಮಮತೆಯಲ್ಲಿ ಮಗು ಬೆಳೆದು ಮತಿವಂತನಾಗುತ್ತಾನೆ. ತಂದೆಯ ನಡವಳಿಕೆಯನ್ನು ಮಗು ಅನುಕರಣ ಮಾಡಿ ಜೀವನವನ್ನು ರೂಪಿಸಿಕೊಳ್ಳುತ್ತಾನೆ. ತಂದೆತಾಯಿಗಳು ಮಗುವಿಗೆ ನಿಜವಾದ ಗುರುಗಳು, ಅಲ್ಲದೆ ಆ ಮಗುವಿನ ಹೊಣೆಗಾರಿಕೆ ಅಷ್ಟೇ ಗುರುತರವಾಗಿದೆ. ಇಂದಿನ ಕಾಲದಲ್ಲಿ ಅನೇಕ ತಂದೆತಾಯಿಗಳಿಗೆ ಮಗುವಿನ ವಿದ್ಯಾಭ್ಯಾಸದ ಬಗ್ಗೆ ಸಾಕಷ್ಟು ಆಸಕ್ತಿಯಿಲ್ಲ. ಮಗುವಿನ ಬಗ್ಗೆ ಉದಾಸೀನವಾದರೆ, ಆತನ ಜೀವನದ ವಿನಾಶಕ್ಕೆ ನಾಂದಿಯಾದೀತು !

ಮೂರನೆಯ ಗುರುವೇ ವಿದ್ಯಾ ಗುರು. ಈ ಗುರುವು ವಿದ್ಯಾರ್ಥಿಯನ್ನು ಆಚಾರ, ವಿಚಾರ, ಸಂಸ್ಕೃತಿ, ದೇಶಾಭಿಮಾನ, ಭಾಷಾಭಿಮಾನ, ಧರ್ಮಾಭಿಮಾನ, ಬೆಳಸಿಕೊಳ್ಳುವಂತೆ ಸುಸಂಸ್ಕೃತನನ್ನಾಗಿ ಮಾಡುತ್ತಾನೆ. ಆದರೆ ವಿದ್ಯಾ ಗುರುವಿನ ಹೊಣೆಗಾರಿಕೆ ತಂದೆ ತಾಯಿಗಳಿಗಿಂತಲೂ

ಗುರುತರವಾದದ್ದು; ಶಿಷ್ಯನಲ್ಲಿ ವಾತ್ಸಲ್ಯವನ್ನು ಇಟ್ಟುಕೊಂಡು ಆತನನ್ನು ನಾಡಿನ ಆದರ್ಶ ವ್ಯಕ್ತಿಯನ್ನಾಗಿ ಮಾಡುತ್ತಾನೆ. ಆದ್ದರಿಂದಲೇ "ಗುರುವಿಲ್ಲದ ಅರಿವಾವುದಯ್ಯ" ಎಂದು ಕರೆದರು.

ವಿದ್ಯಾರ್ಥಿಯು, ಗುರುವಿನಲ್ಲಿ ವಿಧೇಯತೆಯಿಂದಲೂ, ಸೌಜನ್ಯದಿಂದಲೂ, ಗುರುವಿನ ಮಾರ್ಗದರ್ಶನದಂತೆ ನಡೆಯಬೇಕು. ಮತ್ತು "ವಿದ್ಯಾವಿನಯೇನ ಶೋಭತೆ" ವಿನಯವೇ ವಿದ್ಯಾರ್ಥಿಗೆ ಭೂಷಣ. ಗುರುವಿನ ಪ್ರೇಮ ಶಿಷ್ಯನ ಮೇಲೆ ಉಂಟಾದರೆ ಅವನ ಜ್ಞಾನ ಹೆಚ್ಚಾಗಿ ನಾಡಿನ ಆದರ್ಶ ವ್ಯಕ್ತಿಯಾಗುತ್ತಾನೆ.

ಅಗಾಧ ಸಂಶಯಾಂ ಬೋಧಿ ಶರಣಾನುಗ್ರಹ ಪ್ರದಃ |
ಪರಮ ಜ್ಞಾನರೂಪತ್ವಾತ್ ಗುರು ದೇವ ಪರಶಿವಃ ||

ಶ್ರೀ ಗುರುವು ನಾನಾವಿಧ ಸಂಶಯಗಳೆಂಬ ಆಳವಾದ ಭವಸಾಗರವನ್ನು ದಾಟಿಸುವುದಕ್ಕೆ ಉಪಾಯವನ್ನು ಬೋಧಿಸುವವನಾಗಿಯೂ, ಜ್ಞಾನ ಸ್ವರೂಪನೇ ತಾನಾಗಿರುವುದರಿಂದಲೂ ಪರಶಿವ ಸ್ವರೂಪನಾಗಿರುತ್ತಾನೆ.

ಗುರು ಕರುಣಿಸಿದರೆ ಶಿಷ್ಯನ ಆತ್ಮೋದ್ಧಾರ ಖಂಡಿತ. ಇದಕ್ಕೆ ಅನೇಕ ಪ್ರಮಾಣಗಳಿವೆ. ಭಾರತೀಯ ಸನಾತನ ವೇದಗಳು, ಇತಿಹಾಸಗಳು, ಆಚಾರ್ಯರ ನುಡಿಗಳು, ಮಾನವ ಸುಭದ್ರವಾಗಿ ಮುನ್ನಡೆಯಬೇಕಾದರೆ, ದಿವ್ಯ ಮಹಿಮರಾಗಬೇಕಾದರೆ, ಗುರುವಿನ ಉಪದೇಶ ಬೇಕು ಎಂದು, ಇಂಥಾ ಗುರುವಿನ ಜ್ಞಾನ ಪ್ರಧಾನ. ವಯಸ್ಸು ಪ್ರಧಾನವಲ್ಲವೆಂದು ಆದೇಶ ನೀಡಿದೆ. ವಯೋವೃದ್ಧನಾದ ಶಿಷ್ಯನಿಗಿಂತ, ಜ್ಞಾನ ವೃದ್ಧನಾದ ಗುರುವೇ ಹಿರಿಯನು. ಅವನೇ ಪೂಜ್ಯನು. ಗುರುವು ಬ್ರಹ್ಮಚಾರಿಯಾಗಿರಬಹುದು, ಸಂಸಾರಿಯಾಗಿರಬಹುದು. ಆತನ ಉಪದೇಶವೇ ಶಿಷ್ಯನಿಗೆ ನಿಜವಾದ 'ಜ್ಞಾನ ದೀವಿಗೆ'. ಶಿಷ್ಯರಾದವರು ಗುರುವಿನಲ್ಲಿ ಭಕ್ತಿ ಶ್ರದ್ಧೆ ವಿಶ್ವಾಸಗಳನ್ನಿಡಬೇಕು. ಅವರನ್ನು ಪೂಜ್ಯತೆಯಿಂದ ಕಾಣಬೇಕು ಅಂಥಾ 'ಸದ್ಗುರುವಿನ ಉಪದೇಶವೇ ಶಿಷ್ಯೋದ್ಧಾರ.

ಶಿವಂಭೂಯಾತ್

# ಶ್ರೀ ಫಿರಂಗೀಶ್ವರಸ್ವಾಮಿಪ್ರಶಸ್ತಿಃ

ಶ್ರೀಮದ್ಗುರುಫಿರಂಗೀಶಸ್ವಾಮಿನಾಮ್ನಾ ಸುವಿ[illegible]ತಃ |
ಸಿದ್ಧವೀರ ಸ್ವಾಮಿವರ್ಯಃ ಜಯತ್ಯತ್ರ [illegible]ತಲೇ ||೧||

ದೊಡ್ಡದೇವಮಹಾರಾಜಃ ಮಹೀಶೂರಮಹೀಪತಿಃ
ಯತಿವರ್ಯೇಽಭವತ್ಕ್ರುದ್ಧಃ ಕದಾಚಿತ್ಕಾರಣಾಂತರಾತ್ ||೨||

ಆಜ್ಞಾಪಯಾಮಾಸ ನೃಪಃ ಮಠೋ ವಿಧ್ವಸ್ಯತಾಮಿತಿ
ನಿರ್ಮುಕ್ತಾಸ್ತದ್ಭಟೈರ್ಭೂಯಃ ಫಿರಂಗೀಯಂತ್ರಗೋಲಕಾಃ ||೩||

ಮಹಾಪ್ರಭಾವೋಯತಿರಾಟ್ ಕ್ಷಣಾತ್ತಾನ್ ಗೋಲಕಾನ್ ಹಸನ್
ಪುರತಸ್ಸರ್ವಲೋಕಸ್ಯ ಚಕಾರ ಕುಸುಮೋತ್ಕರಾನ್ ||೪||

ಲಜ್ಜಾವಿಸ್ಮಯಭಾರೇಣ ನತಶೀರ್ಷೋ ಮಹೀಪತಿಃ
ಉಪಹಾರೀಚಕಾರಾಸ್ಮೈ ಮಠಾನ್ಪಂಚ ಕೃತಾಂಜಲಿಃ ||೫||

ತದಾಪ್ರಭೃತಿ ಲೋಕೇಽಸ್ಮಿನ್ ಫಿರಂಗೀಶ್ವರನಾಮತಃ
ಅಂಕಪಲ್ಲೀಯತೀಂದ್ರೋಽಯಂ ಪರಾಂ ಖ್ಯಾತಿಮುಪಾಗತಃ ||೬||

ಅದ್ಯಾಪ್ಯೇತೇ ಪಂಚಮಠಾಃ ಅಂಕಪಲ್ಯಾದಿಷು ಸ್ಥಿತಾಃ
ಗವೀಮಠಾಭಿಧಾನೇನ ವಿಶ್ರುತಾ ಭಾಂತಿ ಭೂತಲೇ ||೭||

ಸರ್ಪದಷ್ಟಂ ಮೃತಂ ಬಾಲಂ ಜೀವಯಾಮಾಸ ಯೋಗತಃ
ಲೋಕಸ್ಯ ಪಶ್ಯತಶ್ಚಕ್ರೇ ಪ್ರಸ್ತರಂ ಶರ್ಕರಾಂ ಗುರುಃ ||೮||

ಪ್ರಸರಂತಂ ಮಹಾರೋಗಂ ಕೃಪಾಲುರ್ಯತಿಸತ್ತಮಃ
ವಾರಯಾಮಾಸ ಜನತಾಕ್ಷೇಮಚಿಂತನತತ್ಪರಃ ||೯||

ನಾಗರಸಾಖ್ಯಂ ಭಕ್ತಂ ಸಂತತಿಹೀನಂ ವಿಷೀದಂತಮ್ |
ಕೃತ್ವಾ ಸುಪುತ್ರವಂತಂ ಚಕಾರ ಧನ್ಯಂ ಕೃಪಾಸಾಂದ್ರಃ ||೧೦||

ಜನವಂಚನನಿರತಾನಾಂ ಗಾರುಡಿಕಾನಾಂಚ ಕಾಯಕಂ ತತ್ತ್ವಂ
ಉಪದಿಶ್ಯ ಯೋಗಿವರ್ಯಃ ಸರ್ವಾನ್ ಸನ್ಮಾರ್ಗಗಾಮಿನಶ್ಚಕ್ರೇ ||೧೧||

ಶಿವತತ್ತ್ವಶಿವಾಚಾರಾನ್ ಬೋಧಯಿತುಂ ಚ ಪ್ರಸಾರಯಿತುಮ್ ||
ವಿತತಾನ ತತ್ತ್ವಗೋಷ್ಠೀಃ ಧರ್ಮೋದ್ಧಾರೈಕನಿರತಸ್ಸಃ ||೧೨||

ಏವಂ ಫಿರಂಗೀಶ್ವರ ಯೋಗಿವರ್ಯಃ
ಸರ್ವಸ್ಯ ಲೋಕಸ್ಯ ಹಿತಂ ವಿತನ್ವನ್ !
ಮಹಾಜನೈಶ್ಶಂಸಿತಸಚ್ಚರಿತ್ರಃ
ಜೀವತ್ಸಮಾಧಿಂ ಪ್ರವಿವೇಶ ಮಾನ್ಯಃ ||೧೩||

ಉಭಯ ಭಾಷಾ ವಿದ್ವಾನ್
**ಹ. ವೆ. ನಾರಾಯಣ ಶಾಸ್ತ್ರೀ**

## ಜಯ ಮಂಗಳಂ ಫಿರಂಗೀಶಗೆ

ರಾಗ–ಮೋಹನ, (ಮಿಶ್ರಭಾಷು)

ಜಯ ಮಂಗಳಂ ನಿತ್ಯಾನಂದ ಮಂಗಳಂ |
ಮಂಗಳಂ ಶಿವಯೋಗಿ ಗುರು ಫಿರಂಗೀಶಗೆ ||ಪ||

ಯೋಗಿ ವರಗುರು ಪರಮವೈರಾಗ್ಯ ನಿಧಿಗೆ
ಪಂಚ ಗವಿಮಠದಿ ನೆಲಸಿರ್ಪ ಯತಿಗೆ ||
ನಾಡಿನ ಪ್ರಭುವಿಗೆ ಮಹಿಮೆಯ ತೋರಿಸಿ |
ನೀತಿಯ ಬೋಧಿಸಿ ಉದ್ಧಾರಗೈದವಗೆ ||

ಕ್ಷುದ್ರಮಾಂತ್ರಿಕರ ವಿದ್ಯೆಯನು ಖಂಡಿಸಿ |
ನಿಜತತ್ವ ಸಾರಿದ ಮಹಿಮಾಶೀಲನಿಗೆ ||
ಮನುಜರು ಬೇಡಿದ ವರವನು ಕರುಣಿಸಿ |
ಲೀಲಾವಿನೋದದಿ ಮೆರೆವ ಗುರುವರಗೆ ||

ಇಷ್ಟಲಿಂಗದ ಸಾರವ ಜಗಕೆಲ್ಲ ಬೋಧಿಸಿ
ಜಗದ ಅನಿಷ್ಟವನು ನಿವಾರಿಸಿದ ಮಹಿಮಗೆ ||
ಮಾನವ ವೃಂದಕ್ಕೆ ಶಿವತತ್ವ ಬೋಧಿಸಿ
ಜ್ಯೋತಿಯ ಬೆಳಗಿಸಿ ಶಾಂತಿಯನಿತ್ತವಗೆ ||ಜಯ||

ರಚನೆ: ವಿದ್ವಾನ್. ಜಿ. ವಿ. ಶಿವಸ್ವಾಮಿ

# ಶ್ರೀಗುರು ಫಿರಂಗೀಶ್ವರ ಮಹಾಸ್ವಾಮಿಗಳು

## ಶ್ರೀ ಗವಿಮಠ, ಅಂಕನಹಳ್ಳಿ

ಲಿಂಗಸದ್ಭಾವದೊಳು ಮನಂ ಮುಳುಗಿ ಸ
ರ್ವಾಂಗದೊಳು ಚಲನೆಯಿಲ್ಲದೆ ನಟ್ಟ ದೃಷ್ಟಿರೆ
ಹಿಂಗದಚಲಿತವಾಗಿ ಕಾಷ್ಠೆ ಸಂಭವಿಸಿದ ಶಿವೈಕ್ಯದ ಸಮಾಧಿಬಲಿದು।
ಜಂಗಮಸ್ಥಾನವರಂಗಳೊಳು ತನ್ಮಯರಾಗಿ
ಕಂಗೆ ಗೋಚರಿಸಿದಭವನ ಭಾವದೊಳು ಹೊಳೆದ
ಮಂಗಳ ಕಳಾನಿಧಿಯೆನಿಪ ಫಿರಂಗೀಶ್ವರಾರ್ಯರ ಚರಣಾಂಬುಜಕ್ಕೆ ಶರಣು॥

ದೇಸಿಕ ಪ್ರಸಾದದಿಂ ಭಕ್ತನಾಗುತ ಚೆನ್ನ
ಬಸವ ಪ್ರಸಾದದಿಂ ಜ್ಞಾನಿಯಾಗುತ ಸಿದ್ಧ
ರಸ ಮಹಾಪ್ರಭುವಿನಿಂ ಕರಣ ಸಂತತಿಗಳುರವಣೆಗಳಂ ನಿಲಿಸುತ।

ವಸುಮತಿಯ ಶಿವಶರಣರೆಲ್ಲರ ಗುಣಾವಳಿಗ
ಳೊಸಗೆಯಂ ಕೇಳುತ ನಿತ್ಯದಾಸೋಹ ಸ
ದ್ವ್ಯಸನದಿಂದಿಳೆಯೊಳಾಚರಿಸುವ ಶಿವಯೋಗಿಗಳ
ಚರಣಾಂಬುಜಕ್ಕೆ ಶರಣು ॥

ವರಲಿಂಗಧಾರಣಂ ಶಿವನ ಪೂಜಾನಿಯಮ
ಪರಿವಿಡಿಯ ಪಾದೋದಕ ಪ್ರಸಾದ ಕ್ರಮಂ
ಉರು ಶಿವಾಧಿಕ್ಯ ಮಾಹೇಶ್ವರಾಚರಣೆಯಿಂ ಮೇಲೆ
ಷಟ್‌ಸ್ಥಲವೆಂಬಿವಂ!

ಧರೆಯ ಶಿವಭಕ್ತರೆಲ್ಲರಂ ಕೇಳ್ದು ಸುಜ್ಞಾನ
ಭರಿತರಾಗುತ ಶಿವಾನಂದದ ಸಮಯರಾಗಿ
ಪರಮ ಸರ್ವಜ್ಞತ್ವಕ್ಕೊಡೆಯರಪ್ಪವರ ಸಿದ್ಧಲಿಂಗರ
ಚರಣಾಂಬುಜಕ್ಕೆ ಶರಣು।

ಗುರುವಚನದಮೃತಮಂ ಶ್ರುತಿಪುರಾಣಾಗಮದ
ಪರಮಾರ್ಥದಮೃತಮಂ ವರಪುರಾತನ ವಚನ
ಪರಿಯಾಯದಮೃತಮಂ ಶಿವತಾಂತ್ರಿಕರು ಪೇಳ್ದ
ಸಿದ್ಧಾಂತವೆನಿಪಮೃತಮಂ ।
ಪರಮಾನುಭಾವದನುಭವಗೋಷ್ಠಿಯಮೃತದೊಳು
ಬೆರಸಿ ಮಥನಿಸಿ ಪಡೆದ ಫಿರಂಗೀ ನಾಮ
ದರಿಸಿರ್ಪ ಅಂಕನಹಳ್ಳಿ ಗವಿಮಠಾರ್ಯರ ಚರಣಾಂಬುಜಕ್ಕೆ ಶರಣು

ಹರುಷದಿಂ ಕೇಳ್ದು ಮೆಚ್ಚುವರ ಶಿರದಾಭರಣ
ಉರುಮುದದಿ ಕೇಳ್ವ ಸುಮತಿಗಳ ಕರ್ಣಾಭರಣ
ಪರಮ ಪರಿಣಾಮದಿಂ ಪಠಿಸುವರ ಕಂಠದಾಭರಣವನವರತ ನೆನೆದು
ಪರಿತೋಷಿಸುವ ಸಕಲ ತಾತ್ತ್ವಿಕರ ಹೃದಯದಾ
ಭರಣವಾಯ್ತೆನಿಸಿದ ಶ್ರೀ ಸಿದ್ಧಲಿಂಗ ಶಿವಾಚಾರ್ಯರ
ಚರಿತಾರ್ಥ ಸಿದ್ಧಿಯಹುದೆಂದು ತಿಳಿವವರಮಲ ಚರಣಾಂಬುಜಕ್ಕೆ
ಶರಣು ।

ಹೀ. ಚಿ. ಶಾಂತವೀರಯ್ಯ, ಎಂ. ಎ., ಬಿ. ಇಡಿ.

# ಭೋದಿಸೆನ್ನಗುರುವೆ

ರಾಗ–ಕಲ್ಯಾಣಿ

ಭೋದಿಸೆನ್ನನು ಗುರುವೆ| ನಿನ್ನಯ ದಿವ್ಯ–
ಪಾದಾವ ನಂಬಿರುವೆ
ವೇದಾಂತದೊಳು ಗೋಪ್ಯ | ವಾದತತ್ತ್ವವನೆ,
ಸಂಪಾದಿಸಿ ವಿನದಿ ವಿ | ನೋದಿಸಿ ಸುಖಿಸೆಂದು ||ಪಲ್ಲವಿ||

ತಲೆವಾಗಿ ಬೆಳದಿರುವ | ಪಂಕೇಜದ
ದಳದೆ ತಿರುಗುತಿರುವ
ಕಳಹಂಸ ಶಿಶುವಿನ | ಸುಳುಹನು ತಡೆದು
ತನ್ನಳಿನದ ಕರ್ಣಿಕೆ | ಯೊಳು ನಿಂತು ನಲಿಯೆಂದು ||೧||

ಆದಿಯಂತ್ಯವ ಭೇದಿಸಿ | ನಿರ್ಗುಣವಾದ
ನಾದಿಬ್ರಹ್ಮವ ಸಾಧಿಸಿ
ಹಾದಿನಾಲ್ಕರ ನಡು | ವೇದಿಕೆಯೊಳು ಕುಳಿತು
ವೋದದಿ ದಶವಿಧ | ನಾದವ ಕೇಳೆಂದು ||೨||

ಮೂಲಕುಂಡಲಿಯನೆತ್ತಿ ! ಆಗ್ನೇಯದ
ಮೇಲಣ ನೆಲೆಗೆ ಹತ್ತಿ
ಸಾಲಿಟ್ಟು ಸುರಿತಿರ್ಪ | ಹಾಲನೆ ಸವಿದುಂಡು
ನೀಲ ಜ್ಯೋತಿಯ ದಿವ್ಯ । ಜ್ವಾಲೆಯೊಳ್ ಬೆಳಗೆಂದು ||೩||

ರವಿಶಶಿಗಳ ತಡೆದು | ಸುಷುಮ್ನೆಯ
ನವಮಾರ್ಗದೊಳು ನಡೆದು
ಜವದಿ ಪಶ್ಚಿಮ ದಿಕ್ಕಿ | ನವನೀಧರದ ಮೇಲೆ
ತವೆ ಮೋಕ್ಷಸತಿಯನು । ಭವದಿ ಮೈಮರೆಯೆಂದು ||೪||

ಪರಿಪೂರ್ಣಾನಂದ ಭಾವ | ತಾರಕ ರೂಪ
ಗುರು ಸಿದ್ಧ ದೇವ ದೇವ
ಅರಿದೆನೆಂಬಿವನು | ಮೆರೆದು ಯೆನ್ನೊಳು ನೀನು
ಕುರುಹೇನು ತೋರದೆ | ಬೆರೆ ದೇಕವಾಗೆಂದು ||೫||

ಶ್ರೀ ಸ. ಶಿವಯೋಗಿ

## ನೀನೆ ಅಕಳಂಕ ಗುರು

ರಾಗ—ಸಾರಂಗ

ಸಕಲಕೆಲ್ಲಕೆ ನೀನೆ ಅಕಳಂಕ ಗುರುವೆಂದು
ನಿಖಿಳಶಾಸ್ತ್ರವು ಪೇಳುತಿರಲರಿದೆನು ||ಪ||

ವರಗಂಬಳಿಯ ಸಿದ್ಧ ವರಲಿಂಗನಾಮದಿಂ
ಹರನೆ! ನೀನೆನಗೆ ದೀಕ್ಷೆಯ ಮಾಡಿದೆ |
ವರ ಷಡಕ್ಷರಿಯ ದೇವರ ನಾಮದಿಂದೆನಗೆ
ಅರುಹಿದಿರಿ ಶಿವಶಾಸ್ತ್ರವನುಭವವನು ||೧||

ಅವರವರ ದರುಶನಕೆ, ಅವರವರ ವೇಷದಲಿ,
ಅವರವರಿಗೆಲ್ಲ ಗುರು ನೀನೊಬ್ಬನೆ |
ಅವರವರ ಭಾವಕ್ಕೆ, ಅವರವರ ಪೂಜೆಗಂ,
ಅವರವರಿಗೆಲ್ಲ ಶಿವ ನೀನೊಬ್ಬನೆ ||೨||

ಹೋರಾಟವಿಕ್ಕಿಸಲು ಬೇರಾದೆಯಲ್ಲದೆ
ಬೇರುಂಟೆ ಜಗದೊಳಗೆ ಎಲೆ ದೇವನೆ |
ಆರು ಅರಿಯರು ನೀನು ಬೇರಾದ ಪರಿಗಳನು
ಮಾರಾರಿ ಶಿವ ಷಡಕ್ಷರಿ ಲಿಂಗವೆ ||೩||

—ಮುಪ್ಪಿನ ಷಡಕ್ಷರಿ

# ಶ್ರೀಗುರು ವಚನೋಪದೇಶ

ರಾಗ—ನಾದನಾಮಕ್ರಿಯೆ

ಶ್ರೀಗುರು ವಚನೋಪದೇಶವನಾಲಿಸಿ
ದಾಗಳಹುದು ನರರಿಗೆ ಮುಕುತಿ ||ಪ||

ದುರಿತ ಕರ್ಮವನೊಲ್ಲದಿರು ಪುಣ್ಯವನೆ ಮಾಡು
ಹರನಡಿವಿಡಿ ಶಾಂತರೊಡನಾಡು
ಕರುಣವಿರಲಿ ಜೀವರೊಳು ನೀತಿವಿದನಾಗು
ಪೊರೆ ಪೊರ್ದಿದರನೆಂದು ಬೆಸಸುವ ||

ನಿಂದಿಸಿ ನುಡಿಯದಿರಾರನು ಮನಸಿಗೆ
ಬಂದಂತೆ ನಡೆಯದಿರಿಹದಲ್ಲಿ ।
ಕುಂದುವಡೆಯದಿರು ಕಾಮಾದಿಗಳನು ಜಯಿ
ಸೆಂದು ಕೈವಿಡಿದನುಗ್ರಹಿಸುವ ॥

ಭವಮಾಲೆಗಲಸು ಪುಸಿಯದಿರೆಡರು ಬಂದು
ಕವಿಯಲಂಜದಿರು ಸಂಪದದೊಳು
ತವೆಮುದವಳಿದಿರು ತತ್ತ್ವ ಸಂತತಿಯನು
ವಿವರಿಸಿನೋಡೆಂದು ತಿಳುಪುವ ॥

ಬಳಸದಿರದ್ವೈತವನು ಬಾಹ್ಯದಲಿ
ನಿನ್ನೊಳಗೇಕೋ ಭಾವನೆಯೊಡಗೂಡು
ತಿಳಿದು ಸಮಯ ನಿಷ್ಠೆಗಳಲಿ ವೇದವಿದಭಕ್ತಿ
ಗಳನಗಲದಿರೆಂದುಸುರುವ ||

ಆರು ನಾನೆಂದು ವಿಚಾರಿಸು ವಿಷಮ
ಸಂಸಾರವಿದನು ಕನಸೆಂದರಿ ।
ಮಾರಮರ್ದನ ಶಂಭುಲಿಂಗವನೊಲಿಸಿ
ಗಂಭೀರ ಸುಖದೊಳಿರೆಂದುರುಪುವ ॥

# ಜ್ಯೋತಿ ಬೆಳಗುತಿದೆ

ರಾಗ–ನಾದನಾಮಕ್ರಿಯೆ

ಜ್ಯೋತಿ ಬೆಳಗುತಿದೆ ವಿಮಲ ಪರಂ
ಜ್ಯೋತಿ ಬೆಳಗುತಿದೆ |
ಮಾತು ಮನಂಗಳಿಂದತ್ತತ್ತ ಮೀರಿದ
ಸಾತಿಶಯದ ನಿರುಪಾಧಿಕ ನಿರ್ಮಲ ಜ್ಯೋತಿ ||ಪ||

ಶಿವಧರ್ಮನಾಳವೆಂತೆಂಬ ಕಂಬದ ಮೇಲೆ
ಸುವಿವೇಕ ಹೃದಯಾಬ್ಜ ಪ್ರಣತೆಯೊಳು |
ಸವೆಯದ ಸದ್ಭಕ್ತಿ ರಸತೈಲ ತೀವಿದ
ಪ್ರವಿಮಲ ಕಳೆಯೆಂಬ ಬತ್ತಿವಿಡಿದು ದಿವ್ಯ ||೧||

ಮುಸುಕಿದ ವಿಷಯ ಪತಂಗ ಬಿದ್ದುರುಳೆ ತಾ
ಮಸ ಬುದ್ಧಿಯೆಂಬ ಕತ್ತಲೆಯಳಿಯೆ |
ಮಸಗಿ ಸುಜ್ಞಾನ ವೆಂತೆಂಬ ಮಹಾಪ್ರಭೆ
ಪಸರಿಸಿ ಮಾಯಾಕಾಳಿಕೆ ಪೊರ್ದದನುಪಮ ||೨||

ಪ್ರಣವಾಕಾರದ ಗುಣು ಮೂರು ಮುಟ್ಟದ
ಗಣನೆಗತೀತಾರ್ಥವನೆ ತೋರುವ |
ಅಣುಮಾತ್ರ ಚಲನೆಯಿಲ್ಲದ ಮೋಕ್ಷ ಚಿಂತಾ
ಮಣಿಯೆನಿಸುವ ಶಂಭುಲಿಂಗವೆ ತಾನಾದ ||೩||

**ಶ್ರೀ ನಿಜಗುಣರು**

# ಲಿಂಗಪೂಜೆ

ಲಿಂಗಪೂಜೆಯ ಮಾಡಿರೊನಿಮ್ಮೊಳು ಪ್ರಾಣ
ಲಿಂಗಪೂಜೆಯಮಾಡಿರೊ ||ಪ||
ಗಂಗ ಯಮುನೆಗಳ ಸಂಗಮದೊಳು ಮಿಂದು
ಶೃಂಗಾಟಕದುಪರಿ ರಂಗಮಂಟಪದೊಳು ||ಅ||

ವರಭಕ್ತಿಜಲವನೀಡಿ ಮಜ್ಜನಗೈದು ವಿರತಿಗಂಧವನೆ ತೀಡಿ
ಕರಣೇಂದ್ರಿಯಗಳೆಂಬ ಮಿರುಗುವಕ್ಷತೆಯನಿಟ್ಟರಿವೆಂಬ
ನಿರ್ಮಲಸರಸ ಪುಷ್ಪವ ಸೂಡಿ ||ಲಿಂಗಪೂಜೆಯ ||೧||

ಹರುಷವೆಂಬುವ ಧೂಪವ ಸಮರ್ಪಿಸಿ ವರಬಿಂದು ರುಚಿದೀಪವ
ನಿರದೆತ್ತಿ ಪರಿಪೂರ್ಣ ನೈವೇದ್ಯವನೆ ಮಾಡಿ ಮೆರೆವ ತ್ರಿಗುಣ
ವೆಂಬ ವರತಾಂಬೂಲವ ಕೊಟ್ಟು || ಲಿಂಗಪೂಜೆಯ ||೨||

ಕರದಿಷ್ಟಲಿಂಗವಿದೆ ಶರೀರದಲ್ಲಿ ಪರವಸ್ತುತಾನಾಗಿದೆ
ಹೊರಗೊಳಗೆರಡೆನ್ನದರಿದರಿವನೆ ಮೀರಿ
ಗುರುಸಿದ್ಧನಂಘ್ರಿಯೊಳ್ ಬೆರೆದೇಕಮಯವಾಗಿ|| ಲಿಂಗಪೂಜೆಯ ||೩||

—ಗುರುವೃಷಭ ಕವಿಕೃತ

ಜಯಮಂಗಲಂ ಕರ್ನಾಟಕ ಮಾತೆಗೆ
ಜಯಮಂಗಲಂ ಯತಿಕುಲಪತಿಗೆ
ಜಯಮಂಗಲಂ ಭಕ್ತ ವೃಂದರಕ್ಷಕಗೆ
ಜಯಮಂಗಲಂ ಗವಿಮಠ ಕ್ಷೇತ್ರ ಪಾಲಕಗೆ
ಜಯಮಂಗಲಂ ಗುರು ಫಿರಂಗೀಶಗೆ
ಜಯಮಂಗಲಂ ಸಿದ್ಧಲಿಂಗಯತಿಗೆ
ಜಯಮಂಗಲಂ ಶಿವಸ್ವಾಮಿಬುಧಗೆ
ಜಯಮಂಗಲಂ ಗುರುಕುಲವಿಬುಧ ಜನತೆಗೆ |

# ಪಂಚಾರತಿಗಳು

ಜಯಸಚ್ಚಿದಾನಂದ ನಿತ್ಯಪೂರ್ಣನಿಗೆ ನಿತ್ಯಪೂರ್ಣನಿಗೆ
ಜಯವೆಂದು ಬೆಳಗುವೆ ಸಕಲದೇವನಿಗೆ ॥
ಜಯದೇವ ಜಯದೇವ ॥ಪ॥

ಬಿಂದು ಕಳೆನಾದದಿ ಜನಿಯಿಲ್ಲದಂದು
ಇಂದುಧರ ಮುಖಲೀಲೆ ಇಲ್ಲದಂದು
ಒಂದೆ ಪರವಸ್ತು ತಾನಿರುತಿಹುದೆಂದು
ಒಂದಾರತಿಯನು ತಂದು ಬೆಳಗುವೆನಿಂದು ॥ಜಯದೇವ ॥೧॥

ಗುರುಶಿಷ್ಯ ಶಿವಶಕ್ತಿ ಶಿವಜೀವರೆಂದು
ವರಪೂಜ್ಯ ಪೂಜಕ ಧನಿಭೃತ್ಯರೆಂದು
ಚರಲಿಂಗ ಮುಖವು ಆಯ್ತಿರದೆ ಮತ್ತೊಂದು
ಎರಡಾರತಿಯನು ತಂದು ಬೆಳಗುವೆನಿಂದು ॥ಜಯದೇವ ॥೨॥

ಮೂರ್ಲಿಂಗ ಮೂರಂಗ ಮೂರ್ದೇವರೆಂದು
ಮೂರ್ಲೋಕ ಮೂರ್ತತ್ವ ಗುಣಮಹಾತ್ಮರೆಂದು
ಲೀಲೆಯಿಂ ಮೂವರಣಕ್ಕೊಳಗಾಯಿತೆಂದು
ಮೂರಾರತಿಯನು ತಂದು ಬೆಳಗುವೆನಿಂದು ॥ಜಯದೇವ ।೩॥

ನಾಲ್ಕು ತನುಲಿಂಗಕಳೆ ಚಿದ್ಬಿಂದು ನಾದ
ನಾಲ್ಕು ಘಟ್ಟಿತವಾಗಿ ಘನಲಿಂಗವಾದ
ನಾಲ್ಕರಿಂ ಜಗದಾದಿ ಘನಕೃತ್ಯವೆಂದು
ನಾಲ್ಕಾರತಿಯನು ತಂದು ಬೆಳಗುವೆನಿಂದು ॥ಜಯದೇವ ॥೪॥

ಪಂಚಮುಖವನು ತಳೆದ ಮಾತೃಭೂತಗಳು
ಪಂಚೀಕರಿಸಿ ಬ್ರಹ್ಮ-ಅಂಡರಚನೆಗಳು
ಪಂಚಾಂಗಲಿಂಗ ಶ್ರೀ ವಿರುಪಾಕ್ಷನೆಂದು
ಪಂಚಾರತಿಯನು ತಂದು ಬೆಳಗುವೆನಿಂದು ॥ಜಯದೇವ ॥೫॥





## ಜಿ. ವಿ. ಶಿವಸ್ವಾಮಿ

ವಿದ್ವಾನ್ ಜಿ. ವಿ. ಶಿವಸ್ವಾಮಿಯು ಪುಣ್ಯಪುರುಷರಾದ ಶ್ರೀ ಘಿರಂಗೀಶ್ವರ ಚರಿತ್ರೆಯನ್ನು ಬರೆದು ಸಾಹಿತ್ಯ ಪ್ರಪಂಚಕ್ಕೆ ತನ್ನ ಕೆ ಯನ್ನು ಸಲ್ಲಿಸಿರುವುದು ಸಂತೋಷಕರವಾಗಿದೆ. ಸಾಹಿತ್ಯಾಭಿರುಚಿಯುಳ್ಳ ಉತ್ಸಾಹಿ ತರುಣ ಲೇಖನ ಕಲೆಯಲ್ಲಿ ವಿಶೇಷ ಆಸಕ್ತಿಯುಳ್ಳವ. ಈತನ ಪ್ರಭಾವ ಕೃತಿಯು ಸರ್ವಜನಾದರಣೀಯವಾಗಲೆಂದು ಇನ್ನೂ ಹಲವಾರು ಕೃತಿಗಳನ್ನು ರಚಿಸುವ ಶಕ್ತಿ ಸಾಮರ್ಥ್ಯಗಳನ್ನು ಈಶನು ಅನುಗ್ರಹಿಸಲೆಂದು ಹಾರೈಸುತ್ತೇವೆ.

ಡಾ|| ಶ್ರೀ ಶಿವಕುಮಾರ ಸ್ವಾಮಿಗಳು
ಸಿದ್ಧಗಂಗಾ ಕ್ಷೇತ್ರ

ಬೆಂಗಳೂರು ನಗರದ ಕಾರ್ಪೊರೇಷನ್ ಹೈಸ್ಕೂಲ್ ಒಂದರಲ್ಲಿ ಭಾಷಾ ಅಧ್ಯಾಪಕರಾಗಿರುವ ವಿದ್ವಾನ್, ಹಿಂದೀರತ್ನ ಜಿ. ವಿ. ಶಿವಸ್ವಾಮಿಯವರು ನನಗೆ ತುಂಬಾ ಪರಿಚಿತರು. ಇವರು ಉತ್ಸಾಹಿ ತರುಣ ಸಾಹಿತಿಗಳು ಹಾಗೂ ಸಾರ್ವಜನಿಕ ಸೇವಕರ್ತರು, ಶ್ರೀಯುತರು ಗವಿಮಠದ ಪೂರ್ಣ ಪರಿಚಯ ಉಳ್ಳವರು, ಇಲ್ಲಿ ನಡೆಯುವ ಧಾರ್ಮಿಕ ಮತ್ತು ವಿದ್ಯಾಭಿವೃದ್ಧಿ ಕಾರ್ಯ ಗಳನ್ನು ಕಣ್ಣಾರೆ ಕಂಡವರು; ಶ್ರೀ ಗುರು ಘಿರಂಗೀಶ್ವರ ಮಹಿಮೆಯನ್ನು ಈ ಭಾಗದ ಜನರ ಮುಖದಿಂದ ಕೇಳಿದವರು. ಆದ್ದರಿಂದ ಈ ಗ್ರಂಥವನ್ನು ಬರೆಯಲೂ ಅರ್ಹರಾಗಿರುತ್ತಾರೆ. ಚರಿತ್ರೆಯನ್ನು ಸುಲಲಿತವಾಗಿ ಕನ್ನಡ ಶೈಲಿಯಲ್ಲಿ ಬರೆದಿರುತ್ತಾರೆ. ಆದ್ದರಿಂದ ವಿದ್ವಾನ್ ಜಿ. ವಿ. ಶಿವಸ್ವಾಮಿ ವಂದನಾರ್ಹರಾಗಿರುತ್ತಾರೆ. ಈ ಗ್ರಂಥವನ್ನು ಕನ್ನಡಿಗರು ಓದಿ ಪ್ರಯೋಜನ ಪಡೆಯುತ್ತಾರೆಂದು ನಂಬಿರುವೆ. (ಮುನ್ನುಡಿಯಿಂದ)

ಪಂಡಿತರತ್ನ ಪದ್ಮಶ್ರೀ ಬಿ. ಶಿವಮೂರ್ತಿ ಶಾಸ್ತ್ರೀ
ಬೆಂಗಳೂರು